# ಕುವೆಂಪು ಮಕ್ಕಳ ಕೃತಿಗಳಲ್ಲಿ ಮಾನವೀಯ ಮೌಲ್ಯಗಳ ಶೋಧ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಯ ಆಂಶಿಕ ಅವಶ್ಯಕತೆಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಸಂಪ್ರಬಂಧ


ಸಂಶೋಧನಾ ಅಭ್ಯರ್ಥಿ
ಪಿ. ಸಂಗೀತ

ಮಾರ್ಗದರ್ಶಕ
ಡಾ. ಕೆ. ಸಿ. ಶಿವಾರೆಡ್ಡಿ

ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.



೨೦೦೭

# ಕುವೆಂಪು ಮಕ್ಕಳ ಕೃತಿಗಳಲ್ಲಿ ಮಾನವೀಯ ಮೌಲ್ಯಗಳ ಶೋಧ

ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್) ಪದವಿಯ ಅವಶ್ಯಕತೆಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ನಿಬಂಧ



ಸಂಶೋಧನಾ ಅಭ್ಯರ್ಥಿ
ಸಂಗೀತ .ಪಿ

ಮಾರ್ಗದರ್ಶಕ
ಡಾ. ಕೆ.ಸಿ. ಶಿವಾರೆಡ್ಡಿ

ಕುವೆಂಪು ಕನ್ನಡ ಅಧ್ಯಯನ ಕೇಂದ್ರ, ಕುಪ್ಪಳಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ

೨೦೦೭

# ದೃಢೀಕರಣ ಪತ್ರ

ಸಂಗೀತ ಪಿ. ಅವರು "ಕುವೆಂಪು ಮಕ್ಕಳ ಕೃತಿಗಳಲ್ಲಿ ಮಾನವೀಯ ಮೌಲ್ಯಗಳ ಶೋಧ" ಎಂಬ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಭಾಷೆ ಮತ್ತು ಸಾಹಿತ್ಯ ನಿಕಾಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಈ ನಿಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ಎಂದು ದೃಢೀಕರಿಸುತ್ತೇನೆ.

(ಡಾ. ಕೆ.ಸಿ. ಶಿವಾರೆಡ್ಡಿ)
ಕುವೆಂಪು ಕನ್ನಡ ಅಧ್ಯಯನ ಕೇಂದ್ರ
ಕುಪ್ಪಳಿ, ತೀರ್ಥಹಳ್ಳಿ ತಾಲ್ಲೂಕು
ಶಿವಮೊಗ್ಗ ಜಿಲ್ಲೆ

ದಿನಾಂಕ : ೨೦.೦೭.೨೦೦೭
ಸ್ಥಳ : ಕುಪ್ಪಳಿ



# ಪ್ರಮಾಣ ಪತ್ರ

"ಕುವೆಂಪು ಮಕ್ಕಳ ಕೃತಿಗಳಲ್ಲಿ ಮಾನವೀಯ ಮೌಲ್ಯಗಳ ಶೋಧ" ಎಂಬ ಶೀರ್ಷಿಕೆಯ ಈ ನಿಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಭಾಷೆ ಮತ್ತು ಸಾಹಿತ್ಯ ನಿಕಾಯಕ್ಕೆ ಸಲ್ಲಿಸಲು ಡಾ. ಕೆ.ಸಿ. ಶಿವಾರೆಡ್ಡಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ನಿಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲೀ ಅಥವಾ ಇತರ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : ೨೦.೦೭.೨೦೦೭

(ಪಿ. ಸಂಗೀತ)
ಸಂಶೋಧನಾ ಅಭ್ಯರ್ಥಿ
ಕುವೆಂಪು ಕನ್ನಡ ಅಧ್ಯಯನ ಕೇಂದ್ರ
ಕುಪ್ಪಳಿ

ಮಕ್ಕಳು ದೇವರ ರಾಜ್ಯದ ಪ್ರಜೆಗಳು ;
ಹಾಗೆಯೆ ತಾಯಿ ದೇವರಿಗೆ ಸಮಾನ.

– ಕುವೆಂಪು

---

ಹಕ್ಕಿ ಹೂವು, ಮಕ್ಕಳು
ಇರದೆ ಇದ್ದರೆ
ಆಗುತ್ತಿತ್ತು ನಮ್ಮ ಪೃಥಿವಿ
ಬರಡು ಮರುಧರೆ !

– ಕುವೆಂಪು

# ಪರಿವಿಡಿ

# ೧. ಕುವೆಂಪು ಮಕ್ಕಳ ಕೃತಿಗಳಲ್ಲಿ ಮಾನವೀಯ ಮೌಲ್ಯಗಳ ಶೋಧ (ಅಧ್ಯಯನದ ಉದ್ದೇಶ, ವಿಧಾನ, ವ್ಯಾಪ್ತಿ ಮತ್ತು ಮಿತಿ)

ದೊಡ್ಡವರೆಲ್ಲರ ಹೃದಯದಿ ಕಟ್ಟಿಹ
ತೊಟ್ಟಿಲ ಲೋಕದಲಿ
ನಿತ್ಯ ಕಿಶೋರತೆ ನಿದ್ರಿಸುತಿರುವುದು
ವಿಸ್ಮೃತ ನಾಕದಲಿ
ಮಕ್ಕಳ ಸಂಗದೊಳೆಚ್ಚರಗೊಳ್ಳಲಿ
ಆನಂದದ ಆ ದಿವ್ಯಶಿಶು ;
ಹಾಡಲಿ, ಕುಣಿಯಲಿ ; ಹಾರಲಿ ; ಏರಲಿ
ದಿವಜತ್ವಕೆ ಈ ಮನುಜ ಪಶು ;[೧]

ಈ ಕವಿತೆಯು ಮಾನವ ಸಮುದಾಯದ ಪ್ರತಿಯೊಬ್ಬರಲ್ಲಿ ಶಿಶುತ್ವ ಮತ್ತು ಮುಗ್ಧತೆಯ ನಿರಂತರತೆ ಕೇಂದ್ರಿಕೃತವಾಗಿರುವುದನ್ನು ಧ್ವನಿಸುತ್ತದೆ. ಲೌಕಿಕ ಬದುಕಿನ ಜಂಜಾಟಗಳ ನಡುವೆ ಮಕ್ಕಳ ಸಾಹಿತ್ಯ ಹಾಗೂ ಸಹವಾಸ ಅಲೌಕಿಕ ಲೋಕಕ್ಕೆ ಪ್ರವೇಶಿಕೆಯಾಗುತ್ತದೆ. ಪ್ರತಿಯೊಬ್ಬ ಮನುಷ್ಯನ ಹೃದಯವೆಂಬ ತೊಟ್ಟಿಲಲ್ಲಿ ಶಿಶುತ್ವದ ಹುಡುಕಾಟ ಹಾಗೂ ಅದರ ಎಚ್ಚರ ಮಕ್ಕಳಸಾಹಿತ್ಯ ಅಧ್ಯಯನಕ್ಕೆ ಪ್ರವೇಶಿಕೆಯಾಗಿ ಕಾಣಿಸುತ್ತದೆ. ಮಕ್ಕಳ ಸಾನ್ನಿಧ್ಯದಂತೆ ಮಕ್ಕಳ ಸಾಹಿತ್ಯಕ್ಕೆ ಬದುಕಿನ ಜಂಜಾಟಗಳಿಂದ ಪಾರು ಮಾಡಿ ಆನಂದಲೋಕಕ್ಕೆ ಕರೆದೊಯ್ಯುವ ಸಾಮರ್ಥ್ಯವಿರುವುದರಿಂದಲೇ ಸಾಹಿತ್ಯ ಅಬಾಲವೃದ್ಧರನ್ನು ತನ್ನ ಮಂತ್ರ ಮುಗ್ಧತೆಗೆ ಸೆಳೆದುಕೊಂಡಿದೆ. ಈ ಸಂಪ್ರಬಂಧದಲ್ಲಿ ಅಂಥ ಸಾಹಿತ್ಯದ ಅಧ್ಯಯನವನ್ನು ಮಾಡಲಾಗಿದೆ.

## ಮಕ್ಕಳ ಸಾಹಿತ್ಯ : ಪ್ರಾಚೀನತೆ

ಮಕ್ಕಳ ಸಾಹಿತ್ಯದ ಪ್ರಾಚೀನತೆಯನ್ನು ನಿರ್ದಿಷ್ಟವಾಗಿ ಗುರುತಿಸಲು ಹಲವರು ಪ್ರಯತ್ನಿಸಿದ್ದಾರೆ. ಆದರೂ ನಿರ್ದಿಷ್ಟವಾಗಿ ಹೇಳಲು ಸಾಧ್ಯವಾಗಿಲ್ಲ. ಮಕ್ಕಳ ಸಾಹಿತ್ಯದ ಬೇರುಗಳನ್ನು ಜಾನಪದ ಸಾಹಿತ್ಯದಲ್ಲಿಯೂ ಹುಡುಕುವ ಪ್ರಯತ್ನಗಳು ನಡೆದಿವೆ. ಮಕ್ಕಳ ಲಾಲಿಪದಗಳಲ್ಲಿ, ಅಜ್ಜ ಅಜ್ಜಿಯರು ಹೇಳುವ ಕತೆಗಳಲ್ಲಿ, ಪ್ರಾಸಬದ್ಧವಾದ ಪದಗಳಲ್ಲಿ, ಕೋಲಾಟದ ಹಾಡುಗಳಲ್ಲಿ, ಒಗಟುಗಳಲ್ಲಿ ಮಕ್ಕಳ ಸಾಹಿತ್ಯದ ಲಕ್ಷಣಗಳನ್ನು ಹುಡುಕುತ್ತಿದ್ದಾರೆ.

ಹಾಗೆಯೇ ರಾಜಕುಮಾರ, ರಾಜಕುಮಾರಿಯರ ಕಥೆಗಳು, ಅದ್ಭುತ ರಮ್ಯ ಪವಾಡಗಳನ್ನೊಳಗೊಂಡ ಕಥೆಗಳು, ಕಾಗಕ್ಕ, ಗುಬ್ಬಕ್ಕನ ಕಥೆಗಳನ್ನು ಮಕ್ಕಳ ಸಾಹಿತ್ಯಕ್ಕೆ ಸೇರಿಸುವ ಪರಿಪಾಠವೂ ಇದೆ. ಆದ್ದರಿಂದ ಮಕ್ಕಳ ಸಾಹಿತ್ಯದ ಪ್ರಾಚೀನತೆಯನ್ನು ಮನುಷ್ಯನ ಉಗಮದಿಂದಲೇ ಗುರುತಿಸಿಕೊಳ್ಳಬೇಕಾಗುತ್ತದೆ.

ಹಾಗೆಯೇ ಗುಣಾಢ್ಯನ 'ಬೃಹತ್ಕಥೆ' ವಸುಭಾಗಭಟ್ಟನ ಪಂಚತಂತ್ರ, ಕ್ಷೇಮೇಂದ್ರನ 'ಬೃಹತ್ಕಥಾಮಂಜರಿ', ಸೋಮದೇವಭಟ್ಟನ 'ಕಥಾಸರಿತ್ಸಾಗರ', ಹರಿಷೇಣನ 'ಬೃಹತ್ಕಥಾಕೋಶ' ಮೊದಲಾದ ಕೃತಿಗಳನ್ನು ಮಕ್ಕಳ ಸಾಹಿತ್ಯದ ಸಾಲಿಗೆ ಸೇರಿಸುವ ಪರಿಪಾಠವೂ ನಡೆದಿದೆ. ವಿಷ್ಣುಶರ್ಮ ರಚಿಸಿದ ಪಂಚತಂತ್ರ ಮಕ್ಕಳ ಸಾಹಿತ್ಯದ ಮೂಲ ಗ್ರಂಥವೆಂದು ಭಾರತೀಯ ಸಂದರ್ಭದಲ್ಲಿ ಒಪ್ಪಿಕೊಳ್ಳಲಾಗಿದೆ.[೨]

ಪಾಶ್ಚಾತ್ಯ ದೇಶಗಳಲ್ಲಿ ಮುದ್ರಣ ಕಲೆಯ ಅಭಿವೃದ್ಧಿಯೊಂದಿಗೆ ಮಕ್ಕಳ ಸಾಹಿತ್ಯ ೧೮ನೇ ಶತಮಾನದ ಅನಂತರದಲ್ಲಿ ನಿಶ್ಚಿತ ರೂಪವನ್ನು ಪಡೆದುಕೊಂಡಿತು ಎನ್ನುತ್ತಾರೆ. ಇದಕ್ಕಿಂತ ಹಿಂದೆ ಅಂದರೆ ಕ್ರಿ.ಶ. ಏಳನೇ ಶತಮಾನದಲ್ಲಿ ಚೀನಿ ಭಾಷೆಗೆ ಅನುವಾದಗೊಂಡ ಬುದ್ಧನ ಪೂರ್ವಜನ್ಮದ ವೃತ್ತಾಂತಗಳನ್ನೊಳಗೊಂಡ ಜಾತಕ ಕಥೆಗಳನ್ನು ಮಕ್ಕಳ ಸಾಹಿತ್ಯದ ಆದ್ಯ ಕಥೆಗಳೆಂದು ಗುರುತಿಸಲಾಗಿದೆ. ಇದು ಮುಂದೆ ಎಲ್ಲಾ ಭಾಷೆಗಳಿಗೂ ಅನುವಾದಗೊಂಡು ಎಲ್ಲರ ಕೈಗೆಟಕುವಂತಾಯಿತು. ಹದಿನೆಂಟನೆಯ ಶತಮಾನದ ಆಸುಪಾಸಿನಲ್ಲಿ ಬಹುಮುಖ್ಯವಾಗಿ ಜೊನಾಥನ್ ಸ್ವಿಫ್ಟ್‌ನ 'ಗಲಿವರ್‌ನ ಪ್ರವಾಸಗಳು', ಡೇನಿಯಲ್ ಡಿಫೋನ 'ರಾಬಿನ್‌ಸನ್‌ಕ್ರೂಸೊ', ಪರ್ಶಿಯನ್ ಭಾಷೆಯ 'ಸಾವಿರದೊಂದು ರಾತ್ರಿ' ಕಥೆಗಳು. ಬನಿಯನ್ ಕವಿಯ 'ದಿ ಪಿಲ್‌ಗ್ರಿಮ್ಸ್ ಪ್ರೊಗ್ರೆಸ್', ಲೂಯಿಕೆರಾಲ್‌ರ 'ಆ್ಯಲೀಸ್ ಇನ್‌ವಂಡರ್‌ಲ್ಯಾಂಡ್' ಕೃತಿಗಳು ಮಕ್ಕಳ ಕಲ್ಪನಾ ವೈಖರಿಯನ್ನು ವಿಕಾಸಗೊಳಿಸುವ ಹಂತಕ್ಕೆ ಪ್ರವೇಶಿಸಿದವು. ಇಷ್ಟೇ ಅಲ್ಲದೆ ೧೯ ಮತ್ತು ೨೦ನೇ ಶತಮಾನಗಳಲ್ಲಿ ಮಕ್ಕಳ ಸಾಹಿತ್ಯ ಮತ್ತೂ ವಿಶಾಲವಾಗಿ ಬೆಳೆಯತೊಡಗಿತು. ಪಾಶ್ಚಾತ್ಯ ವಿಚಾರಧಾರೆಗಳಿಂದ ಪ್ರಭಾವಿತಗೊಂಡ ಭಾರತೀಯ ಲೇಖಕರು ಇತರ ಭಾರತೀಯ ಭಾಷೆಗಳಲ್ಲಿಯೂ ಮಕ್ಕಳ ಸಾಹಿತ್ಯ ರಚಿಸಲು ಪ್ರಾರಂಭಿಸಿದರು. ದುರ್ಗಸಿಂಹನ ಪಂಚತಂತ್ರ ಕೃತಿಯನ್ನು ಕನ್ನಡದಲ್ಲಿ ಮಕ್ಕಳಿಗಾಗಿ ಬರೆದ ಮೊದಲ ಕೃತಿಯೆಂದೂ, ದುರ್ಗಸಿಂಹನನ್ನು ಕನ್ನಡ ಮಕ್ಕಳ ಸಾಹಿತ್ಯದ ಮೂಲ ಪುರುಷನೆಂದು ಗುರುತಿಸಿದೆ. ಪಂಚತಂತ್ರದ ಕಥೆಗಳು ಮುಂದೆ ಸೃಷ್ಟಿಯಾದ ಮಕ್ಕಳ ಸಾಹಿತ್ಯಕ್ಕೆ ಮೂಲ ಆಕರಗಳಾದವು.

ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಮಕ್ಕಳ ಸಾಹಿತ್ಯದ ಬೆಳವಣಿಗೆ ಪ್ರಾಚೀನದಾದರೂ ಇಪ್ಪತ್ತನೇ ಶತಮಾನದಲ್ಲಿಯೇ ಅದರ ಸ್ವರೂಪ ಸ್ಪಷ್ಟವಾಗತೊಡಗಿದ್ದು ಎಂಬುದನ್ನು ಮರೆಯುವಂತಿಲ್ಲ. ಇಂಗ್ಲಿಷ್ ಸಾಹಿತ್ಯ ಸಂಪರ್ಕದಿಂದ ಹೊಸ ಸಾಹಿತ್ಯ ಪ್ರಕಾರಗಳು ನಮ್ಮಲ್ಲಿ ರೂಪುಗೊಳ್ಳತೊಡಗಿದ ಕಾಲದಲ್ಲಿಯೇ ಮಕ್ಕಳ ಸಾಹಿತ್ಯವೂ ಪ್ರತ್ಯೇಕ ಪ್ರಕಾರವಾಗಿ ಬೆಳೆಯತೊಡಗಿತು. ಅಂದರೆ ಇಪ್ಪತ್ತನೆಯ ಶತಮಾನದ ಉದಯ ಕಾಲದಲ್ಲಿ 'ಮಕ್ಕಳಿಗಾಗಿ' ಬರೆದ ಸಾಹಿತ್ಯ ಪ್ರಕಾರವೊಂದು ಅಭಿವ್ಯಕ್ತಿಯ ಮಾಧ್ಯಮವಾಗಿ ಬೆಳೆಯತೊಡಗಿತು. ಸೃಷ್ಟಿಶೀಲ ಬರಹಗಾರರಾದ ಚ. ವಾಸುದೇವಯ್ಯ, ಪಂಜೆ ಮಂಗೇಶರಾಯ, ಎಸ್.ಜಿ. ನರಸಿಂಹಾಚಾರ್ಯ, ಗೋವಿಂದ ಪೈ., ಕಾರಂತ, ಕುವೆಂಪು, ರಾಜರತ್ನಂ, ಹೊಯ್ಸಳ ಮೊದಲಾದವರು ಮಕ್ಕಳ ಬಗೆಗಿನ ಕಾಳಜಿ ಶ್ರದ್ಧೆಗಳಿಂದ ಮಕ್ಕಳ ಸಾಹಿತ್ಯ ಕನ್ನಡದಲ್ಲಿ ಸಮೃದ್ಧಿಯನ್ನು ಪಡೆಯಿತು. ಆ ಸಮೃದ್ಧಿಯು ಮಕ್ಕಳ ಸಾಹಿತ್ಯ ನಿರ್ಮಿತಿಗೆ ಒಂದು ಮಾರ್ಗವನ್ನೇ ಕನ್ನಡದಲ್ಲಿ ಸ್ಥಾಪಿಸಿದೆ. ಹೀಗೆ ನಿರ್ಮಾಣಗೊಂಡಿರುವ ಮಕ್ಕಳ ಸಾಹಿತ್ಯದಲ್ಲಿ ಕುವೆಂಪು ಅವರಿಂದ ರಚಿತಗೊಂಡಿರುವ ಮಕ್ಕಳ ಸಾಹಿತ್ಯದಲ್ಲಿನ ಧೋರಣೆ, ಉದ್ದೇಶಗಳನ್ನು ಶೋಧಿಸಿಕೊಳ್ಳುವುದು ಈ ಅಧ್ಯಯನದ ಮುಖ್ಯ ಉದ್ದೇಶ.

## ಅಧ್ಯಯನದ ಉದ್ದೇಶ

ಕನ್ನಡದಲ್ಲಿ ಮಕ್ಕಳ ಸಾಹಿತ್ಯ ಅನೇಕ ಚಿಂತನಶೀಲ ಪ್ರತಿಭೆಗಳ ಮೂಲಕ ಅಭಿವ್ಯಕ್ತಗೊಂಡಿದೆ. ಆದರೆ ಈ ಅಧ್ಯಯನದಲ್ಲಿ ನವೋದಯ ಸಂದರ್ಭದ ಬಹುಮುಖ ಪ್ರತಿಭೆಯಾದ ಕುವೆಂಪು ಅವರ ಮಕ್ಕಳ ಸಾಹಿತ್ಯವನ್ನು ಪ್ರಮುಖವಾಗಿಟ್ಟುಕೊಂಡು ಚರ್ಚಿಸಲ್ಪಡುತ್ತದೆ. ಕುವೆಂಪು ಅವರು ತಾವು ಮಕ್ಕಳಿಗಾಗಿ ರಚಿಸಿದ ಸಾಹಿತ್ಯ ಕೃತಿಗಳ ಮೂಲಕ ನಡೆಸುತ್ತಿರುವ ಸಾಂಸ್ಕೃತಿಕ ರಾಜಕಾರಣ ಯಾವ ರೀತಿಯದ್ದು ಎಂದು ಅರಿತುಕೊಳ್ಳುವುದು ಈ ಪ್ರಬಂಧದ ಕೇಂದ್ರ ಉದ್ದೇಶ. ಕುವೆಂಪು ಅವರು ಪ್ರತಿಪಾದಿಸುತ್ತಿರುವ ಸಾಂಸ್ಕೃತಿಕ ರಾಜಕಾರಣ ಇತರ ಲೇಖಕರಿಗಿಂತ ಭಿನ್ನವೂ, ಮಾನವೀಯವೂ, ಜವಾಬ್ದಾರಿಯುತ ಮೌಲ್ಯವಾಗಿಯೂ ಕಾಣುತ್ತದೆ. ಸಾಮಾಜಿಕ, ರಾಜಕೀಯ, ಧಾರ್ಮಿಕ ಹಾಗೂ ಭಾರತೀಯ ಕೌಟುಂಬಿಕ ಪರಿಸರದಲ್ಲಿನ ಅಂಕುಶಗಳಿಗೆ ಒಳಗಾದ ಚೇತನಗಳಲ್ಲಿ ಆತ್ಮಶ್ರೀ ಪ್ರಜ್ಞೆಯನ್ನು ಬಿತ್ತುವ ಕಾರ್ಯಕ್ಕೆ ತೊಡಗಿದ್ದಾರೆ. ಅಂಥ ಕಾರ್ಯದಿಂದ ಪಾರಂಪರಿಕ ಅಮಾನವೀಯ ಮೌಲ್ಯಗಳನ್ನು ನಿರಾಕರಿಸಿ ಆಧುನಿಕ ಸಂದರ್ಭದಲ್ಲಿ ಮಾನವೀಯ ಮೌಲ್ಯಗಳನ್ನು ಪ್ರತಿಷ್ಠಾಪಿಸಲು ಬಯಸಿದ್ದಾರೆ. ಆ ಮೌಲ್ಯಗಳನ್ನು ಮಕ್ಕಳಲ್ಲಿ ಬೆಳೆಸುವ ಹೊಣೆಗಾರಿಕೆಯನ್ನು ತೋರಿದ್ದಾರೆ. ಇಂತಹ ಮಾನವೀಯ ಜೀವಕೇಂದ್ರಿತ ಮೌಲ್ಯಗಳು ಮಕ್ಕಳ ವ್ಯಕ್ತಿತ್ವ ವಿಕಾಸಕ್ಕೆ ಸಾಕಷ್ಟು ಸಹಕರಿಸುತ್ತವೆ. ಹಾಗಾಗಿ ಅಧ್ಯಯನದ ಮುಖೇನ ಕುವೆಂಪು ಅವರ ಮಕ್ಕಳ ಕೃತಿಗಳಲ್ಲಿ ಪ್ರಕಟವಾಗಿರುವ ಮಾನವೀಯ ಮೌಲ್ಯಗಳನ್ನು ಹುಡುಕುವ ಪ್ರಯತ್ನವನ್ನು ಮಾಡಲಾಗುತ್ತದೆ.

> "ಪ್ರತಿಯೊಂದು ಮಗುವೂ ಹುಟ್ಟುತ್ತಲೆ - ವಿಶ್ವಮಾನವ. ಬೆಳೆಯುತ್ತಾ ನಾವು ಅದನ್ನು 'ಅಲ್ಪಮಾನವ'ನನ್ನಾಗಿ ಮಾಡುತ್ತೇವೆ. ಮತ್ತೆ ಅದನ್ನು 'ವಿಶ್ವಮಾನವ'ನನ್ನಾಗಿ ಮಾಡುವುದೆ ವಿದ್ಯೆಯ ಕರ್ತವ್ಯವಾಗಬೇಕು.
>
> ಹುಟ್ಟುವಾಗ ವಿಶ್ವಮಾನವನಾಗಿಯೇ ಹುಟ್ಟಿದ ಮಗುವನ್ನು ನಾವು ದೇಶ, ಭಾಷೆ, ಮತ, ಜನಾಂಗ, ವರ್ಣ ಇತ್ಯಾದಿ ಉಪಾಧಿಗಳಿಂದ ಬದ್ಧನನ್ನಾಗಿ ಮಾಡುತ್ತೇವೆ. ಅವೆಲ್ಲವುಗಳಿಂದ ಪಾರಾಗಿ ಅವನನ್ನು ಬುದ್ಧನನ್ನಾಗಿ, ಅಂದರೆ ವಿಶ್ವಮಾನವನನ್ನಾಗಿ ಪರಿವರ್ತಿಸುವುದೆ ನಮ್ಮ ವಿದ್ಯೆ, ಸಂಸ್ಕೃತಿ, ನಾಗರೀಕತೆ ಎಲ್ಲದರ ಆದ್ಯ ಕರ್ತವ್ಯವಾಗಬೇಕು. ಪ್ರಪಂಚದ ಮಕ್ಕಳೆಲ್ಲ 'ಅನಿಕೇತನ'ರಾಗಬೇಕು. ಲೋಕ ಉಳಿದು, ಬಾಳಿ ಬದುಕಬೇಕಾದರೆ!"[3]

ಹೀಗೆ ಕುವೆಂಪು ಅವರು ವಿಶ್ವಮಾನವ ಸಂದೇಶದಲ್ಲಿರುವ ಮೌಲ್ಯಗಳನ್ನು ಮಕ್ಕಳ ಮುಗ್ಧ ಮನಸ್ಸುಗಳಲ್ಲಿ ಬಿತ್ತಲು ನಡೆಸಿರುವ ಪ್ರಯತ್ನವನ್ನು ಶೋಧಿಸಿಕೊಳ್ಳುವುದು ಈ ಅಧ್ಯಯನದ ಮುಖ್ಯ ನೆಲೆಗಳಲ್ಲಿ ಒಂದು.

ಮಕ್ಕಳ ಸಾಹಿತ್ಯ ಕುವೆಂಪು ಅವರಿಗೆ ಇನ್ನಿತರ ಸಾಹಿತ್ಯದಷ್ಟೇ ಮಹತ್ವವಾದ ಅಭಿವ್ಯಕ್ತಿ ಮಾಧ್ಯಮವಾಗಿ ಕಾಣಿಸಿಕೊಂಡಿದೆ. ಹಾಗೆಯೇ ಬೇರೆಲ್ಲ ಸಾಹಿತ್ಯಕ್ಕಿಂತಲೂ ಮಕ್ಕಳ ಸಾಹಿತ್ಯದ ಜವಾಬ್ದಾರಿಗಳು ಮಹತ್ತರವಾದುದೆಂದು ಭಾವಿಸುತ್ತಾರೆ. ಏಕೆಂದರೆ ಬಾಲ್ಯದಲ್ಲಿಯೇ ಉದಾತ್ತವಾದ ಮೌಲ್ಯಗಳನ್ನು ಮಕ್ಕಳಲ್ಲಿ ಬೆಳೆಸದಿದ್ದರೆ ಮುಂದೆ ಆಗುವ ಅನರ್ಥಗಳ ಪರಿಣಾಮದ ಬಗೆಗಿನ ಅರಿವಿನಿಂದಲೇ ಈ ಅಭಿವ್ಯಕ್ತಿ ಮಾಧ್ಯಮವನ್ನು ಗಂಭೀರವಾಗಿ ಪರಿಗಣಿಸಿದ್ದಾರೆ. ವೈಜ್ಞಾನಿಕತೆ, ವೈಚಾರಿಕತೆ, ನೈತಿಕತೆಗಳ ಸಂಲಗ್ನತೆಯನ್ನು ಮಕ್ಕಳಲ್ಲಿ ಬೆಳೆಸುವುದರಿಂದ ಉತ್ತಮ ಸಾಮಾಜಿಕ ಪರಿಸರ ನಿರ್ಮಾಣವಾಗುತ್ತದೆ ಎಂಬ ಸತ್ಯ ಅವರ ಕೃತಿಗಳಲ್ಲಿ ಪ್ರತಿಪಾದಿತವಾಗಿದೆ. ಅಲ್ಪಮಾನವತೆಯನ್ನು ತೊರೆದು

ವಿಶ್ವಮಾನವ ಪ್ರಜ್ಞೆಯನ್ನು ಜಾಗೃತಗೊಳಿಸಿಕೊಂಡು ಎಲ್ಲರೂ ವಿಶ್ವಮಾನವರಾಗಬೇಕೆಂಬ ಧೋರಣೆ ಅವರ ಕೃತಿಗಳಲ್ಲಿ ಮೈಪಡೆದಿದೆ. ಇದನ್ನು ಕೂಲಂಕುಷವಾಗಿ ಪರಿಶೀಲಿಸಿ ವಿಶ್ಲೇಷಣೆಗೊಳಪಡಿಸುವುದು ಪ್ರಬಂಧದ ಗುರಿಯಾಗಿದೆ.

ಮಕ್ಕಳ ಗ್ರಹಿಕೆಗೆ ನಿಲುಕುವಂತಹ ಸಾಹಿತ್ಯ ಪ್ರಕಾರಗಳಾದ ಕವನ, ನಾಟಕ ಮತ್ತು ಕಥೆಯನ್ನು ಆಯ್ಕೆಮಾಡಿಕೊಂಡು 'ನನ್ನ ಮನೆ', 'ಮೇಘಪುರ', 'ಮರಿವಿಜ್ಞಾನಿ', 'ಮೋಡಣ್ಣನ ತಮ್ಮ', 'ನನ್ನ ಗೋಪಾಲ', 'ಬೊಮ್ಮನಹಳ್ಳಿಯ ಕಿಂದರಜೋಗಿ', 'ಹಾಳೂರು', 'ಅಮಲನಕಥೆ', 'ನರಿಗಳಿಗೇಕೆ ಕೋಡಿಲ್ಲ' ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. ಈ ಎಲ್ಲಾ ಕೃತಿಗಳು ಮಕ್ಕಳ ಸಾಹಿತ್ಯದ ಗುಂಪಿಗೆ ಸೇರಿದ್ದರೂ ಕೂಡ ಅತ್ಯುತ್ತಮ ಸಾಂಸ್ಕೃತಿಕ ಮೌಲ್ಯಗಳನ್ನು ಯುವ ಚೇತನಗಳಿಗೆ ವರ್ಗಾಯಿಸುವಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸಿವೆ. ಕಾವ್ಯ, ನಾಟಕ, ಕಥೆಗಳಂಥ ಸಾಹಿತ್ಯ ಪ್ರಕಾರಗಳು ಮಕ್ಕಳ ಅನುಭವ ಪ್ರಜ್ಞೆಯನ್ನು ವಿಸ್ತರಿಸಿ, ಉನ್ನತೀಕರಿಸಿ, ವಿಶಾಲಗೊಳಿಸುತ್ತವೆ. ಅಂತೆಯೇ ಆ ಪ್ರಕಾರಗಳ ಮೂಲಕ ಅಭಿವ್ಯಕ್ತಗೊಂಡ ಸಾಹಿತ್ಯ ಹೊಸ ಬೆಳಕಿನ ಹೊಸ ದೃಷ್ಟಿಕೋನವನ್ನು ಹೊರಹೊಮ್ಮಿಸುತ್ತದೆ. ಈ ಕಾರಣಗಳಿಂದ ಸಾಹಿತ್ಯ ಕಲಾಕೃತಿಗಳ ಶ್ರೇಣಿಯಲ್ಲಿ ಕುವೆಂಪು ಅವರ ಮಕ್ಕಳ ಸಾಹಿತ್ಯ ಅನನ್ಯವಾದ ಸ್ಥಾನವನ್ನು ಸ್ಥಾಪಿಸಿಕೊಂಡಿದೆ. ಇಂತಹ ಶ್ರೇಷ್ಠ ಕಲಾಕೃತಿಗಳು ನೀಡುವ ಕಾಣ್ಕೆ ಯಾವ ಬಗೆಯದ್ದು ಎಂದು ತಿಳಿಯುವುದು ಪ್ರಬಂಧದ ಆಶಯವಾಗಿದೆ.

'ನನ್ನ ಮನೆ', 'ಮೇಘಪುರ', 'ಮರಿವಿಜ್ಞಾನಿ'ಯಂತಹ ಕವನ ಸಂಕಲನಗಳಲ್ಲಿ ತೀರಾ ಸಹಜವಾದ, ಸರಳವಾದ, ಸಾಮಾನ್ಯವಾದ ವಿಷಯಗಳ ಮೂಲಕವೇ ಕವಿ ಮಕ್ಕಳಲ್ಲಿ ವೈಜ್ಞಾನಿಕವಾದ ಮತ್ತು ವೈಚಾರಿಕವಾದ ಮೌಲ್ಯಗಳನ್ನು ಬಿತ್ತಲು ಪ್ರಯತ್ನಿಸಿದ್ದಾರೆ. ಅಸಂಖ್ಯ ಪ್ರಶ್ನೆಗಳ ಮೂಲಕ ಮಕ್ಕಳು ಮುಖಾಮುಖಿಯಾಗುವುದು ಇಲ್ಲಿನ ಹಲವು ಕವನಗಳ ಮುಖ್ಯ ನೆಲೆಯಾಗಿದೆ. ಹಣದ ಬೆನ್ನುಹತ್ತಿದ ಮನುಷ್ಯನ ಕಾಂಚನಾಭಿಲಾಶೆಯನ್ನು 'ಹಣ' ಕವಿತೆಯಲ್ಲಿ ಪ್ರಶ್ನಿಸಿರುವ ರೀತಿಯನ್ನು ಇಲ್ಲಿ ಉದಾಹರಿಸಬಹುದು.

**ಹಣವೆಂದರೆ ನಾವಾಡುವ ಮಣ್ಣಿನ ಪುಡಿಗಿಂತಲೂ ಚೆಲುವೇನಮ್ಮಾ?**
**ಧೂಳಿನಷ್ಟು ಅದು ನುಣ್ಣಗಿಹುದೇ ಹೇಳಮ್ಮಾ?**
**ಧೂಳಿನಷ್ಟು ಅದು ಸಣ್ಣಗಿಹುದೇ ಹೇಳಮ್ಮಾ?**[೪]

ಎಂದು ಬದುಕಿನಲ್ಲಿ ಹಣದ ಪ್ರಾಧಾನ್ಯತೆವೊಂದನ್ನೇ ನಂಬಿದ ಧೋರಣೆಯನ್ನು ಪ್ರಶ್ನಿಸುತ್ತಾರೆ. ಅಂತೆಯೇ ಪ್ರಕೃತಿಯ ಸೂರ್ಯಚಂದ್ರರನ್ನು ಮುಗ್ಧ ಚೇತನಗಳಿಗೆ ಸರಳ ಭಾಷೆಯ ಮೂಲಕ ಪರಿಚಯಿಸುತ್ತಾ ನಿತ್ಯ ಗೋಚರವಾಗುವ ಅರ್ಧಚಂದ್ರನನ್ನು

**ದೇವರ ಪೆಪ್ಪರಮೆಂಟೇನಮ್ಮಾ**
**ಗಗನದೊಳಲೆಯುವ ಚಂದಿರನು?**
**ಎಷ್ಟೇ ತಿಂದರೂ ಖರ್ಚೇ ಆಗದ**
**ಬೆಳೆಯುವ ಪೆಪ್ಪರಮೆಂಟೇನಮ್ಮಾ!**[೫]

ಎನ್ನುತ್ತಾ ಮಕ್ಕಳಲ್ಲಿ ಆಶ್ಚರ್ಯ, ಕೌತುಕಗಳನ್ನು ಮೂಡಿಸುತ್ತಾರೆ. ಈ ಆಶ್ಚರ್ಯ ಕೌತುಕಗಳೇ ಮಕ್ಕಳ ಪ್ರಜ್ಞೆಯನ್ನು ಕೆರಳಿಸಿ ಆಳವಾದ ಆಲೋಚನೆಗಳಲ್ಲಿ ಮುಳುಗಿಸುತ್ತವೆ. ಈ ಬಗೆಯ ಚಿಂತನೆಗಳು ಅನೇಕ ಕವನಗಳಲ್ಲಿ ಅಂತರ್ಗತವಾಗಿವೆ. ಅವುಗಳನ್ನು ಅಧ್ಯಯನದ ಮೂಲಕ ಚರ್ಚೆಗೊಳಪಡಿಸಲಾಗುತ್ತದೆ.

ವಿವರಣಾಪ್ರಧಾನವಾದ ಮಹಾಕಾವ್ಯವನ್ನು ಸೃಷ್ಟಿಸಿದ ಪ್ರತಿಭೆಯೇ 'ಮೋಡಣ್ಣನ ತಮ್ಮ' ಮತ್ತು 'ನನ್ನ ಗೋಪಾಲ' ನಾಟಕಗಳನ್ನು ಸೃಷ್ಟಿಸಿರುವುದು ಮಹತ್ವದ ಸಂಗತಿಯಾಗಿದೆ. 'ಮೋಡಣ್ಣನ ತಮ್ಮ' ಮತ್ತು 'ನನ್ನ ಗೋಪಾಲ' ನಾಟಕಗಳು ಒಂದು ನೆಲೆಯಲ್ಲಿ ಪರಿಸರ ಸ್ನೇಹಿ ಸಂಬಂಧಗಳನ್ನು ಗಟ್ಟಿಗೊಳಿಸುತ್ತವೆ. ಪ್ರಕೃತಿ ಜಗತ್ತನ್ನು ಸೇರುವ ಹೆಬ್ಬಯಕೆಯನ್ನಿಟ್ಟುಕೊಂಡಿರುವ ಬಾಲಕ ಒಂದೆಡೆಯಾದರೆ ಬನದ ಗೋಪಾಲನೊಂದಿಗೆ ನಿತ್ಯವೂ ವ್ಯವಹರಿಸುವ ಗೋಪಾಲ ಮತ್ತೊಂದೆಡೆ. ಎರಡೂ ಪಾತ್ರಗಳು ಸಾಮಾನ್ಯತೆಯನ್ನು ಮೀರಿ ಅಸಮಾನ್ಯತೆಯ ಕಡೆಗೆ ಮುಖಮಾಡಿ ನಿಂತಿವೆ. ಪ್ರಾಕೃತಿಕ ಸಂಬಂಧಗಳು ಮತ್ತು ಮಾನವ ಸಂಬಂಧಗಳು ನಾಟಕಗಳಲ್ಲಿ ಅಭಿನ್ನತೆಯನ್ನು ಸೂಚಿಸುತ್ತವೆ. ಮೋಡಣ್ಣ ಮತ್ತು ತಮ್ಮ, ಬನದ ಗೋಪಾಲ ಮತ್ತು ಗೋಪಾಲನ ನಡುವೆ ಸ್ನೇಹ ಭಾವಗಳು ಮೊಳಕೆಯೊಡೆಯುತ್ತಿವೆ. ಪ್ರೀತಿ, ಪ್ರೇಮಗಳು ಪುಟಿಯುತ್ತಿವೆ. ನಿರೂಪಕರು ಎರಡೂ ನಾಟಕಗಳಲ್ಲಿ ಮನುಷ್ಯ ಮತ್ತು ಪರಿಸರವನ್ನು ಸಮನ್ವಯಗೊಳಿಸಿದ್ದಾರೆ. ಆಧುನಿಕ ಪರಿಸರ ಚಿಂತನೆಯಾದ ಡೀಪ್ ಎಕಾಲಜಿಯ ಪರಿಸರ ಕೇಂದ್ರಿತ ತತ್ತ್ವದ ಮುಖೇನ ಪರಿಸರ ಮತ್ತು ಮನುಷ್ಯ ಸಂಬಂಧವನ್ನು ಮಕ್ಕಳಲ್ಲಿ ಬಿತ್ತುವ ಕಾರ್ಯವನ್ನು ಕೈಗೊಂಡಿದ್ದಾರೆ. ಈ ಸ್ನೇಹ ಪ್ರೀತಿಗಳು ಮಕ್ಕಳ ಸಾಹಿತ್ಯದಲ್ಲಿ ಯಾವ ಸ್ತರದ ಸ್ಥಾನಮಾನಗಳನ್ನು ಆಕ್ರಮಿಸಿಕೊಂಡಿವೆ ಎಂಬುದರ ಗ್ರಹಿಕೆ ಅಧ್ಯಯನದಲ್ಲಿ ಮುಖ್ಯವಾಗುತ್ತದೆ.

'ಹಾಳೂರು' ಕವನ ಸಂಕಲನ ಪರಿಸರದ ಬದುಕಿನಿಂದ ಯಾಂತ್ರೀಕೃತ ಬದುಕಿನ ನಗರೀಕರಣದ ಕಥೆಯೂ ಅಥವಾ ಅಂತಹ ನಗರೀಕೃತ ಸಂವೇದನೆ ತನ್ನ ಪರಿಸರಕ್ಕೆ ಹಿಂತಿರುಗಿದ ಸಂದರ್ಭದಲ್ಲಿ ಎದುರಾಗುವ ಸಂಕಟದ ಕಥನವೂ ಆಗಿದೆ. ಅಂದರೆ ನಗರೀಕರಣದ ಅಸಂಖ್ಯ ಕರಾಳ ಮುಖಗಳನ್ನು ಪರಿಚಯಿಸುತ್ತಲೇ ಭಾರತದ ಗ್ರಾಮೀಣ ಹಳ್ಳಿಗಳ ಜೀವನಾಡಿಯನ್ನು, ಜೀವಸೆಲೆಗಳನ್ನು ಹೀರಿಕೊಳ್ಳುತ್ತಿರುವ ನಗರದ ಆಕರ್ಷಣೀಯ ಹಾಗೂ ವಂಚನೆಯ ನೆಲೆಗಳನ್ನು ಕವನದಲ್ಲಿ ವ್ಯಂಗ್ಯಕ್ಕೆ ಗುರಿಪಡಿಸಲಾಗುತ್ತಿದೆ. ನಗರ ಬದುಕಿನ ಆಮಿಷ, ಆಶ್ವಾಸನೆಗೆ ಇಡೀ ಭಾರತದ ಹಳ್ಳಿಗಳೇ ಗುಳೆಯೆದ್ದು ಹೋದಾಗ ನಿರ್ಮಾಣವಾಗುವ ಸಂಕಟವನ್ನು ಇಲ್ಲಿಯ ನಿರೂಪಕ ಕಟ್ಟಿಕೊಡುತ್ತಿದ್ದಾರೆ. ಇಂದಿನ ಬಾಲಚೇತನಗಳು ಮುಂದೆ ದೇಶದ ಉನ್ನತ ಪ್ರತಿಭೆಗಳಾಗಲು ಸ್ಥಳೀಯ ಪರಂಪರೆ ಹೆಚ್ಚು ಉಪಯುಕ್ತವಾಗುತ್ತದೆ. ಉತ್ತಮ ಮತ್ತು ಉನ್ನತ ಶಿಕ್ಷಣದ ಮೂಲಕ ಮಕ್ಕಳು ವಿದ್ಯಾವಂತರಾಗಿ ಸಮಗ್ರ ಗ್ರಾಮೀಣ ಪರಿಸರವನ್ನು ಮೇಲ್ಮಟ್ಟಕ್ಕೆ ಕೊಂಡೊಯ್ಯುವಂತಾಗಬೇಕೆಂಬ ಧೋರಣೆ ಇಲ್ಲಿಯದು. ಹಾಗಾಗಿ ಶಿಕ್ಷಣ ಮಕ್ಕಳ ಬದುಕಿನಲ್ಲಿ ಯಾವ ಪಾತ್ರ ವಹಿಸಿದೆ ಎಂಬುದರ ತಿಳುವಳಿಕೆ ಪ್ರಬಂಧದಲ್ಲಿ ಸೇರಿಕೊಳ್ಳಲಿದೆ.

'ಶ್ರೀ ರಾಮಾಯಣ ದರ್ಶನಂ' ಕೃತಿಯಲ್ಲಿ ಪ್ರತಿಪಾದಿತವಾಗಿರುವ 'ಪಾಪಿಗು ಉದ್ಧಾರವಿಹುದು' ಎನ್ನುವ ತತ್ತ್ವ 'ನರಿಗಳಿಗೇಕೆ ಕೋಡಿಲ್ಲ' ಎಂಬ ಕಥೆಯಲ್ಲಿ ಬೀಜರೂಪದಲ್ಲಿ ಅಡಕವಾಗಿದೆ. ಮನುಷ್ಯರ ಗುಣಸ್ವಭಾವಗಳನ್ನು ಪ್ರಾಣಿಗಳಿಗೆ ಅನ್ವಯಿಸಿ ಆ ಮೂಲಕ ಸಮುದಾಯದಲ್ಲಿ ಮನುಷ್ಯ ಸಂಬಂಧಗಳು ಬಲಗೊಂಡು ಉತ್ತಮ ನಡವಳಿಕೆಗಳನ್ನು ರೂಢಿಸಿಕೊಳ್ಳಬೇಕೆಂಬುದು ಇಲ್ಲಿನ ಮುಖ್ಯ ಆಶಯವಾಗಿದೆ. ಪ್ರಾಣಿ, ಪಕ್ಷಿಗಳು ಮುಗ್ಧ ಚೇತನಗಳಿಗೆ ಹೆಚ್ಚು ಆಕರ್ಷಕವಾಗಿ ಕಾಣಿಸುತ್ತವೆ ಎಂಬ ಉದ್ದೇಶದಿಂದ ಕವಿ ಕಥನದಲ್ಲಿ ಈ ತಂತ್ರಗಾರಿಕೆಯನ್ನು ಬಳಸಿಕೊಂಡಿದ್ದಾರೆ. ಕುವೆಂಪು ಅವರ ಕಲ್ಪನಾ ವೈವಿಧ್ಯದಲ್ಲಿ ಹಾಗೂ ವಾಕ್ ಚಾತುರ್ಯದಲ್ಲಿ ಪ್ರಾಣಿ ಪಕ್ಷಿಗಳು ಹೇಗೆ ಅಭಿವ್ಯಕ್ತಗೊಂಡಿವೆ ಹಾಗೂ ಅವು ಹೊರಡಿಸುತ್ತಿರುವ ವೈಚಾರಿಕತೆ ಯಾವ ನೆಲೆಯುಳ್ಳದ್ದು ಎಂಬುದನ್ನು ಅಧ್ಯಯನದ ಮೂಲಕ ಕಂಡುಕೊಳ್ಳಲು ಉದ್ದೇಶಿಸಲಾಗಿದೆ.

ಅಲ್ಪತೆಯಲ್ಲಿಯೇ ಮಹತ್ತಾದದ್ದನ್ನು ದರ್ಶಿಸಿ, ನುಡಿದ ಭಾಷೆಗೆ ಎರಡು ಬಗೆಯದೆ ಶಾಶ್ವತ ಪದವಿಯನ್ನು ಪಡೆದ ಶ್ರೀ ಸಾಮಾನ್ಯನೇ ಅಮಲ. ಬಡತನದಲ್ಲಿ ಕಾಲ ನೂಕುತ್ತಿದ್ದರು ಎದೆಗುಂದದೆ ಅಷ್ಟೇ ಸುಖ ಸಂಭ್ರಮದಲ್ಲಿದ್ದ. ಎಷ್ಟೇ ಕಷ್ಟಗಳಿದ್ದರೂ ಧೈರ್ಯ, ಸಾಹಸಗಳಿಂದ ಮುಂದೆ ಬರಬೇಕು. ಆಗ ಭಗವಂತನ ಪ್ರೀತಿ, ಪ್ರೇಮ, ಆಶೀರ್ವಾದಗಳು ಎಲ್ಲರಿಗೂ ಲಭ್ಯವಾಗುತ್ತವೆ ಎಂಬ ಸತ್ಯವನ್ನು ಸಾಧಿಸುತ್ತಲೇ ಮಕ್ಕಳಿಗೆ ಯೋಗ್ಯವೆನಿಸುವಂತಹ, ನೈತಿಕ ವಿಚಾರವನ್ನು ಪ್ರಸ್ತುತಪಡಿಸುತ್ತಾರೆ. ಶಿಶು ಸಾಹಿತ್ಯದ ಕಥನಗಳು ಹೊರಹಾಕುತ್ತಿರುವ ನೈತಿಕಾಂಶಗಳು ಯಾವ ಪ್ರಮಾಣದಲ್ಲಿವೆ ಎಂದು ತಿಳಿಯುವುದು ಪ್ರಬಂಧದ ಮುಖ್ಯ ನೆಲೆಯಾಗಿದೆ.

ತಾಯಿ ಅಥವಾ ಮಾತೃತ್ವದ ಕಲ್ಪನೆ ಇಲ್ಲಿನ ಬಹುತೇಕ ಕೃತಿಗಳಲ್ಲಿ ಅಡಗಿದೆ. ಪ್ರೀತಿ, ಪ್ರೇಮ, ಮಮತೆ, ಕರುಣೆ, ಅನುಕಂಪಗಳ ಪ್ರತಿರೂಪವೇ ತಾಯಿ. ಮಗುವಿಗೆ ಆಶ್ಚರ್ಯ, ಅನುಮಾನ, ಪ್ರಶ್ನೆಗಳು ಉಂಟಾದಾಗ ಅದು ತಾಯಿಯ ಮೂಲಕ ಪರಿಹರಿಸಿಕೊಳ್ಳಲು ಪ್ರಯತ್ನಿಸುವ ಹಲವಾರು ಉದಾಹರಣೆಗಳು ಎಲ್ಲಾ ಕವನಗಳಲ್ಲಿ ಮೂಡಿವೆ. ಇನ್ನುಳಿದ ಎಲ್ಲಾ ವಸ್ತುಗಳಿಗಿಂತ ತಾಯಿಯೇ ಉತ್ತುಂಗ ಶಿಖರ ಎಂಬ ಭಾವನೆ ಪ್ರಖರವಾಗಿದೆ. ಹಾಗೆಯೇ ತಾಯಿ ಮತ್ತು ಮಕ್ಕಳ ನಡುವಿನ ಸ್ನೇಹ, ಪ್ರೀತಿಗಳ ಸಂವಹನ ಎಂತಹದ್ದು? ಮಗುವಿನ ಮುಗ್ಧ ಪ್ರಶ್ನೆಗಳಿಗೆ ತಾಯಿಯ ಉತ್ತರ ಯಾವ ಬಗೆಯದ್ದು ಎಂದು ಅರಿಯುವ ಪ್ರಯತ್ನವನ್ನು ಅಧ್ಯಯನದ ಮೂಲಕ ಮಾಡಲಾಗುತ್ತದೆ.

ಮಹಾತ್ಮಗಾಂಧಿಯವರು ತಮ್ಮ ಚಿಂತನೆಯ ತಾತ್ತ್ವಿಕ ಬೀಜರೂಪ ಕೃತಿಯಾದ 'ಹಿಂದ್ ಸ್ವರಾಜ್'ನ ವಿವರಣೆಯ ಮಾತು ಒಂದರಲ್ಲಿ "ಈ ಪುಸ್ತಕವನ್ನು ಎಳೆಯ ಮಗುವಿಗೂ ಕೊಡಬಹುದು. ಇದು ದ್ವೇಷದ ಬದಲು ಪ್ರೀತಿಯನ್ನು ಬೋಧಿಸುತ್ತದೆ. ಹಿಂಸೆಗೆ ಬದಲು ಆತ್ಮತ್ಯಾಗವನ್ನು ಕಲಿಸುತ್ತದೆ. ಪಶುಬಲಕ್ಕೆ ವಿರುದ್ಧವಾಗಿ ಆತ್ಮಬಲವನ್ನು ನಿಲ್ಲಿಸುತ್ತದೆ..... ಓದಬಯಸುವವರಿಗೆಲ್ಲ ಇದು ಯೋಗ್ಯವೆಂದು ಸೂಚಿಸುತ್ತೇನೆ"[೬] ಎಂದು ಬರೆದಿದ್ದಾರೆ. ಈ ಮೇಲಿನ ಗಾಂಧಿ ಮಾತನ್ನು ಕುವೆಂಪು ಅವರು ಮಕ್ಕಳಿಗಾಗಿ ಬರೆದ ಕೃತಿಗಳ ಬಗೆಗೂ ಸತ್ಯದ ಮಾತೆಂದು ಹೇಳಬಹುದು. ಮೂಲಭೂತವಾದ, ಭಯೋತ್ಪಾದನೆ ಅಂಥ ಸಮಸ್ಯೆಗಳು ಇಂದು ಜಾಗತಿಕ ಮಟ್ಟದ ವಾಸಿಯಾಗಲಾರದ ರೋಗಗಳಾಗಿ ಪರಿಣಮಿಸಿವೆ. ಈ ರೋಗಗಳನ್ನು ಮಕ್ಕಳ ಮನಸ್ಸುಗಳಲ್ಲಿ ಬಿತ್ತುವ ಕೆಲಸವು ತುಂಬಾ ಪ್ರಯತ್ನ ಪೂರ್ವಕವಾಗಿ ಎಲ್ಲೆಡೆ ನಡೆಯುತ್ತಿದೆ. ಎಲ್ಲೆಡೆ ಹೃದಯವೈಶಾಲ್ಯದ ಬದಲು ಸಂಕುಚಿತತೆಯನ್ನು ಬಿತ್ತುವ ಹುನ್ನಾರುಗಳು ನಡೆಯುತ್ತಿವೆ. ಇಂಥ ಗೊಂದಲದ, ಸಾಮಾಜಿಕ ರೋಗಗಳ ಮೇಲಾಟದ ಸಂದರ್ಭದಲ್ಲಿ ಕುವೆಂಪು ಅವರು ಮಕ್ಕಳಿಗಾಗಿ ಬರೆದ ಕೃತಿಗಳನ್ನು ನಮ್ಮ ಮಕ್ಕಳೆಲ್ಲ ಕೇಳುವಂತಾಗಬೇಕು. ಓದುವಂತಾಗಬೇಕು. ಆ ಮೂಲಕ ಅವು ಪ್ರಸ್ತುತಗೊಂಡು ಉತ್ತಮ ಸಮಾಜ ನಿರ್ಮಾಣಕ್ಕೆ ನಾಂದಿಯಾಗಬೇಕಾಗಿದೆ. ವಿಶ್ವಮಾನವ ತತ್ತ್ವಗಳನ್ನು ಮಕ್ಕಳಲ್ಲಿ ಭಿತ್ತಿ, ಬೆಳೆಸಿ ವಿಶ್ವದ ಕ್ಷೇಮವನ್ನು ಕಾಪಾಡಬೇಕಾದ ಹೊಣೆ ಈ ಹಿಂದಿಗಿಂತ ಇಂದು ದಿನೇ ದಿನೇ ಹೆಚ್ಚಾಗುತ್ತಿರುವ ಸಂದರ್ಭ, ಸನ್ನಿವೇಶದಲ್ಲಿ ನಾವಿದ್ದೇವೆ. ಹಾಗಾಗಿ ಕುವೆಂಪು ಅವರು ಮಕ್ಕಳನ್ನು ಕುರಿತು ಬರೆದಿರುವ ಕೃತಿಗಳ ಮರುವಿಶ್ಲೇಷಣೆ ಪ್ರಸ್ತುತವೆಂದು ಭಾವಿಸಿ ಈ ಅಧ್ಯಯನಕ್ಕೆ ತೊಡಗಿದ್ದೇನೆ.

## ಅಧ್ಯಯನದ ವಿಧಾನ, ವ್ಯಾಪ್ತಿ ಮತ್ತು ಮಿತಿ

ಕುವೆಂಪು ಅವರ ಮಕ್ಕಳ ಸಾಹಿತ್ಯದಲ್ಲಿ ಮಾನವೀಯ ಮೌಲ್ಯಗಳ ಸ್ವರೂಪವನ್ನು ಗ್ರಹಿಸಿ ಅದರ ವಿಭಿನ್ನ ನೆಲೆಗಳನ್ನು ವಿಶ್ಲೇಷಿಸುವುದು ಈ ಸಂಪ್ರಬಂಧದ ವ್ಯಾಪ್ತಿಗೆ ಒಳಪಡುತ್ತದೆ. ಇಲ್ಲಿ ವಿಶ್ಲೇಷಣಾತ್ಮಕ ವಿಧಾನವನ್ನು ಅನುಸರಿಸಲಾಗಿದೆ.

ಮಕ್ಕಳಿಗಾಗಿ ಬರೆದ ಸಾಹಿತ್ಯದ ಹಿಂದಿರುವ ಉದ್ದೇಶವೇನು? ಮಕ್ಕಳ ಸಾಹಿತ್ಯದಲ್ಲಿ ಅಭಿವ್ಯಕ್ತಗೊಂಡಿರುವ ಮೌಲ್ಯಗಳು ಯಾವುವು? ಎಂಬ ಪ್ರಶ್ನೆಗಳನ್ನು ಮುಖ್ಯವಾಗಿಸಿಕೊಂಡು ಅಧ್ಯಯನ ಮಾಡುವುದು ಪ್ರಬಂಧದ ವ್ಯಾಪ್ತಿಗೆ ಸೇರುತ್ತದೆ.

ಮಕ್ಕಳ ಸಾಹಿತ್ಯ ಬಾಲ್ಯದಲ್ಲಿ ತಮ್ಮ ಮೇಲೆ ಬೀರಿದ ಪ್ರಭಾವವನ್ನು ಕುರಿತು ಕೆಲವು ಸಾಧಕರ ಅನುಭವಗಳನ್ನು ವಿಶ್ಲೇಷಿಸುವುದು ಈ ಪ್ರಬಂಧದ ಹಿನ್ನೆಲೆಗಿದೆ. ಕನ್ನಡದಲ್ಲಿ ಮಕ್ಕಳ ಸಾಹಿತ್ಯದ ರಚನೆಯ ಬಗೆಗೆ ಅಭಿವ್ಯಕ್ತಗೊಂಡಿರುವ ಸಂಗತಿಗಳನ್ನು ಇಲ್ಲಿ ಪರಿಶೀಲಿಸಲಾಗುವುದು.

ಈ ಸಂಪ್ರಬಂಧದಲ್ಲಿ ಮುಖ್ಯವಾಗಿ ಕುವೆಂಪು ಅವರು ರಚಿಸಿದ ಮಕ್ಕಳ ಸಾಹಿತ್ಯವನ್ನು ಕುರಿತ ಅಧ್ಯಯನಕ್ಕೆ ಮಾತ್ರ ಹೆಚ್ಚು ಒತ್ತು ಕೊಡಲಾಗಿದೆ. ಅಂದರೆ ಕನ್ನಡ ವಿಮರ್ಶೆ ಗುರುತಿಸಿರುವ ಈ ಕೆಳಗಿನ ಒಂಬತ್ತು ಕೃತಿಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಅಮಲನ ಕಥೆ (೧೯೨೪), ಬೊಮ್ಮನಹಳ್ಳಿಯ ಕಿಂದರಿಜೋಗಿ (೧೯೨೬), ಮೇಘಪುರ (೧೯೪೭), ನನ್ನ ಮನೆ (೧೯೪೭), ಮರಿವಿಜ್ಞಾನಿ (೧೯೪೭), ಮೋಡಣ್ಣನ ತಮ್ಮ (೧೯೨೬), ನರಿಗಳಿಗೇಕೆ ಕೋಡಿಲ್ಲ (೧೯೭೭), ನನ್ನ ಗೋಪಾಲ (೧೯೩೦), ಹಾಳೂರು (೧೯೨೬).

ಕನ್ನಡದ ಸಂದರ್ಭದಲ್ಲಿ ಪ್ರಕಟಗೊಂಡಿರುವ ಒಟ್ಟು ಮಕ್ಕಳ ಸಾಹಿತ್ಯವನ್ನು ಕುರಿತ ಅಧ್ಯಯನ ಈ ಸಂದರ್ಭದಲ್ಲಿ ಕಾಲ ಮತ್ತು ಉದ್ದೇಶಗಳ ದೃಷ್ಟಿಯಿಂದ ಸಾಧ್ಯವಿಲ್ಲವಾದ್ದರಿಂದ ಇಲ್ಲಿ ಕುವೆಂಪು ಅವರ ಸಾಹಿತ್ಯವನ್ನು ಮಾತ್ರ ಅಧ್ಯಯನಕ್ಕೆ ಗುರಿಪಡಿಸಲು ಯೋಜಿಸಲಾಗಿದೆ. ಆದರೂ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಮಕ್ಕಳ ಸಾಹಿತ್ಯ ಪರಂಪರೆಯನ್ನು ಸಂಕ್ಷಿಪ್ತವಾಗಿ ಗ್ರಹಿಸಲಾಗಿದೆ.

**ಅಡಿಟಿಪ್ಪಣಿ :**

೧. ಶಿವಾರೆಡ್ಡಿ ಕೆ.ಸಿ. (ಸಂ.), ಕುವೆಂಪು ಸಮಗ್ರ ಗದ್ಯ, ಸಂಪುಟ ೨, ಪ್ರಸಾರಾಂಗ, ಕ.ವಿ.ವಿ., ಹಂಪಿ, ೨೦೦೪, ಪು – ೭೫೭
೨. ಜಯವಂತ ಕಾಡದೇವರ ; ಆಧುನಿಕ ಕನ್ನಡ ಸಾಹಿತ್ಯ ರೂಪಗಳು ; 'ಕರ್ನಾಟಕ ಭಾರತಿ' ಬೆಳ್ಳಿಹಬ್ಬ ಸಂಪುಟ, ಪ್ರಸಾರಾಂಗ, ಕರ್ನಾಟಕ ವಿ.ವಿ., ಧಾರವಾಡ, ೧೯೯೬, ಪು – ೨೨೭
೩. ಕುವೆಂಪು; ಪಂಚಮಂತ್ರ ಮತ್ತು ಸಪ್ತಸೂತ್ರ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು – ೧
೪. ಕುವೆಂಪು, ನನ್ನ ಮನೆ, ಉದಯರವಿ ಪ್ರಕಾಶನ, ಮೈಸೂರು, ೧೯೮೮, ಪು – ೨೪
೫. – ಅದೇ –, ಪು – ೬
೬. ಗಾಂಧೀ ಮೋ.ಕ., ಆತ್ಮಕಥೆ (ಸಂಕ್ಷಿಪ್ತ) ಮತ್ತು ಹಿಂದ್ ಸ್ವರಾಜ್, ಅನು ಸಿದ್ಧವನಹಳ್ಳಿ ಕೃಷ್ಣಶರ್ಮ, ಗಾಂಧೀ ಸ್ಮಾರಕ ನಿಧಿ, ೧೯೫೮, ಪುಟ – xii

* * *

# ೨. ಮಕ್ಕಳ ಸಾಹಿತ್ಯದ ಜವಾಬ್ದಾರಿ

ನವೋದಯ ಸಾಹಿತ್ಯ ಸಂದರ್ಭದಲ್ಲಿ ಇನ್ನಿತರ ಸಾಹಿತ್ಯಪ್ರಕಾರಗಳಂತೆಯೇ ಮಕ್ಕಳಿಗಾಗಿ ಬರೆದ ಸಾಹಿತ್ಯ ಪ್ರಕಾರವೊಂದು ಆವಿಷ್ಕಾರಗೊಂಡಿತು. ಇದು ಮುಖ್ಯವಾಗಿ ಕಥೆ, ಕವನ, ನಾಟಕ ಪ್ರಕಾರಗಳಲ್ಲಿ ತನ್ನ ವೈಶಾಲ್ಯತೆಯನ್ನು ಪಡೆಯಿತು. ಇಂಥ ಸಾಹಿತ್ಯ ಪ್ರಕಾರಗಳು ಮಕ್ಕಳಲ್ಲಿ ಆಧುನಿಕ ಮೌಲ್ಯಗಳ ಬೆಳವಣಿಗೆಗೆ ಹಾಗೂ ಲೋಕಜ್ಞಾನದ ವಿಕಸನಕ್ಕೆ ಉಪಯುಕ್ತವಾಗುತ್ತವೆ. ಬಾಲ್ಯದಲ್ಲಿಯೇ ಧೈರ್ಯ, ಸಾಹಸ, ಕಲ್ಪನೆ, ದೇಶಭಕ್ತಿ, ಭಾಷಾಭಿವೃದ್ಧಿ, ಔದಾರ್ಯ, ಪರಿಸರ ಪ್ರೀತಿ, ಗುರು ಹಿರಿಯರಲ್ಲಿ ಭಕ್ತಿ, ಗೌರವ, ಮಾನವೀಯ ಸಂಬಂಧಗಳ ಮಹತ್ವ - ಹೀಗೆ ಹಲವಾರು ಮೌಲ್ಯಗಳನ್ನು ಇಂಥ ಸಾಹಿತ್ಯದ ಮೂಲಕ ಬೆಳೆಸಲು ಹೊರಟಿರುವುದನ್ನು ಕಾಣಬಹುದು. ಆದರೂ ಮಕ್ಕಳ ಸಾಹಿತ್ಯ ಹೊಂದಿರಬೇಕಾದ ಗುಣಾವಗುಣಗಳ ಬಗೆಗೂ ಅನೇಕ ಅಭಿಪ್ರಾಯಗಳು ಜೊತೆಜೊತೆಯಲ್ಲಿಯೇ ಪ್ರಕಟವಾಗುತ್ತಲೇ ಬಂದಿವೆ.

ನವೋದಯ ಸಂದರ್ಭದಲ್ಲಿ ಮಕ್ಕಳಿಗಾಗಿ ಅನೇಕ ಲೇಖಕರು ಅಭಿವ್ಯಕ್ತಿಗೆ ತೊಡಗಿದಂತೆಯೇ ಪ್ರಕಾಶಕರು ಪತ್ರಿಕೆಗಳ ಮೂಲಕ, ಪ್ರಕಾಶನಗಳ ಮೂಲಕ ಮಕ್ಕಳ ಸಾಹಿತ್ಯದ ಅಭಿವೃದ್ಧಿಗೆ ಪ್ರೋತ್ಸಾಹವನ್ನು ನೀಡುತ್ತಲೇ ಬಂದಿದ್ದಾರೆ. ಹಾಗೆಯೇ ಮಕ್ಕಳ ಸರ್ವಾಂಗೀಣ ಅಭಿವೃದ್ಧಿಗಾಗಿ ಅನೇಕ ಮಹನೀಯರು ಬೇರೆ ಬೇರೆ ರೀತಿಯಲ್ಲಿ ಆರ್ಥಿಕವಾಗಿ ಹಾಗೂ ಭೌತಿಕ ಮೂಲಭೂತ ಸೌಲಭ್ಯಗಳನ್ನು ಒದಗಿಸಿ ಸಂಘ ಸಂಸ್ಥೆಗಳ ಮೂಲಕ ಶಿಶು ಸಾಹಿತ್ಯದ ಪ್ರೇರಣೆಗೆ ಸಹಾಯವಾಗಿರುವುದನ್ನು ಕಾಣುತ್ತೇವೆ.

ಕನ್ನಡದಲ್ಲಿ ಮಕ್ಕಳ ಸಾಹಿತ್ಯವನ್ನು ಕುರಿತು ಹೆಚ್ಚು ತಲೆಕೆಡಿಸಿಕೊಂಡ ಅನೇಕರು ಮಕ್ಕಳ ಸಾಹಿತ್ಯದಲ್ಲಿರಬೇಕಾದ ಅಂಶಗಳನ್ನು, ಲಕ್ಷಣಗಳನ್ನು ಸೂಚಿಸಿದ್ದಾರೆ. ಅವರಲ್ಲಿ ಮಕ್ಕಳ ಸಾಹಿತ್ಯದ ಜನಕರೆಂದೇ ಪ್ರಸಿದ್ಧರಾದ ಪಂಜೆ ಮಂಗೇಶರಾಯರು, ಬಾಲವನದ ಸ್ಥಾಪಕರು, ಮಕ್ಕಳಿಗಾಗಿ ವಿಶ್ವಕೋಶಗಳನ್ನು ಪ್ರಪ್ರಥಮವಾಗಿ ಕನ್ನಡದಲ್ಲಿ ಸಿದ್ಧಪಡಿಸಿದ ಕೆ. ಶಿವರಾಮಕಾರಂತರ ಮಾತುಗಳನ್ನು ಇಲ್ಲಿ ದಾಖಲಿಸುವುದು ಸೂಕ್ತವೆಂದು ಕಾಣುತ್ತದೆ. ಈ ಮಹನೀಯರು ಕನ್ನಡದಲ್ಲಿ ಮುಂದೆ ರೂಪುಗೊಳ್ಳಬೇಕಾದ ಮಕ್ಕಳ ಸಾಹಿತ್ಯ ಪ್ರಮಾಣ, ಗುಣಮಟ್ಟ, ಅದರಿಂದ ಉಂಟಾಗಬಹುದಾದ ಫಲ ಗಳನ್ನು ಸೂಚಿಸಿದ್ದಾರೆ. ಹಾಗೆಯೇ ಮಕ್ಕಳಲ್ಲಿ ಬೆಳಸಬೇಕಾದ ಜೀವನ ಮೌಲ್ಯಗಳನ್ನು ಇಲ್ಲಿ ಕಾಣಿಸಿದ್ದಾರೆ.

## ಕನ್ನಡದಲ್ಲಿ ಮಕ್ಕಳ ಸಾಹಿತ್ಯ – ಲಕ್ಷಣಗಳ ಚಿಂತನೆ

'ಬಾಲಸಾಹಿತ್ಯ' ಎಂಬ ಭಾಷಣದಲ್ಲಿ ಕನ್ನಡ ಮಕ್ಕಳ ಸಾಹಿತ್ಯ ಜನಕರೆಂದೇ ಪ್ರಸಿದ್ಧರಾದ ಪಂಜೆ ಮಂಗೇಶರಾಯರು ಮಕ್ಕಳ ಸಾಹಿತ್ಯದ ಲಕ್ಷಣಗಳನ್ನು ಈ ಕೆಳಕಂಡಂತೆ ಗುರುತಿಸಿದ್ದಾರೆ.

೧. ಮಕ್ಕಳಿಗಾಗಿ ಬರೆಯುವ ಕಥಾ ವಿಷಯವು ಮಕ್ಕಳ ಪ್ರಪಂಚಕ್ಕೆ ಒಳಪಟ್ಟಿರಬೇಕು. ಮಕ್ಕಳ ಇಂದ್ರಿಯಗಳಿಗೆ ಗ್ರಹಣವಾಗುವ ವಿಷಯಗಳು ಮಕ್ಕಳ ಸಾಹಿತ್ಯದಲ್ಲಿರಬೇಕು. ಸಣ್ಣ ಮಕ್ಕಳಿಗೆ ರುಚಿಸುವ ಸಾಹಿತ್ಯದ ಬಗೆಗೆ ಅರಿವಿರಬೇಕು.

೨. ಮಕ್ಕಳ ಕಥೆಗಳಲ್ಲಿ ಒಂದಿಷ್ಟು ಅದ್ಭುತ ರಸವಿರಬೇಕು. ಮಕ್ಕಳಲ್ಲಿ ಕಲ್ಪನಾಶಕ್ತಿ ಹೆಚ್ಚು. ಆದ್ದರಿಂದ ಕಥೆಗಳಲ್ಲಿ ಅದ್ಭುತವಿದ್ದರೆ ಅವರ ಕಲ್ಪನಾಶಕ್ತಿಯ ಓಲಾಟಕ್ಕೆ ಅವಕಾಶವಾಗುತ್ತದೆ.

೩. ಮಕ್ಕಳ ಕಥೆಗಳಲ್ಲಿ ಧರ್ಮಬೋಧನೆಯು ಅಂತರಂಗದಲ್ಲಿ ಅಡಗಿದ್ದಿರಬೇಕು. ಧರ್ಮಬೋಧನೆಗಾಗಿಯೇ ಕಥೆಯನ್ನು ಕಟ್ಟಿದಂತೆ ಇರಬಾರದು. ಧೈರ್ಯ, ಪರೋಪಕಾರ, ಸ್ವಾವಲಂಬನೆ, ದೀರ್ಘಪ್ರಯತ್ನ, ಸೌಹಾರ್ದ ಮೊದಲಾದ ಸದ್ಗುಣಗಳನ್ನು ಕಾರ್ಯರೂಪವಾಗಿ ತೋರಿಸತಕ್ಕ ಕಥೆಗಳು ಮಕ್ಕಳಿಗೆ ತಕ್ಕವು.

೪. ಮಕ್ಕಳ ಕಥೆಗಳಲ್ಲಿ ಪ್ರಯೋಗಿಸತಕ್ಕ ಭಾಷೆಯು ಸುಲಭವಿರತಕ್ಕದ್ದು; ಶಬ್ದಗಳು ಮನೆಮಾತುಗಳಿರಬೇಕು. ವಾಕ್ಯಗಳು ಉದ್ದವಿರದೆ ಚಿಕ್ಕವಿರುವುದು ಅಗತ್ಯ.

೫. ಕಥೆಗಳಲ್ಲಿ ಹೇಳಿಕೆಗಿಂತ ಸಂಭಾಷಣೆ ಅಧಿಕವಿರಬೇಕು. ಪುನರುಕ್ತಿಯು ಮಕ್ಕಳ ಸಾಹಿತ್ಯದಲ್ಲಿ ಅಗತ್ಯ. ಮಕ್ಕಳ ಕಥೆಗಳಲ್ಲಿ ವಿನೋದ, ಹಾಸ್ಯಗಳು ಅಗತ್ಯ. ಹಳೆಯ ಕಥೆಗಳಲ್ಲಿ ಇರುವ ಅಶ್ಲೀಲ, ಅಸಹ್ಯತೆಗಳನ್ನು ತೆಗೆದುಹಾಕಿ ಮಕ್ಕಳಿಗೆ ಒದಗಿಸಿಕೊಡಬೇಕು.[೧]

ಎಳೆಯ ಕೂಸುಗಳು - ಊಹಾ ರಾಜ್ಯದಲ್ಲಿ ನಲಿದಾಡುವುವು. ಅವಕ್ಕೆ ಸುಂದರವಾದ ಕಲ್ಪನೆಗಳಲ್ಲಿ, ಊಹೆಗಳಲ್ಲಿ, ಪ್ರಾಣಿ ಜೀವನದಲ್ಲಿ ತುಂಬ ಪ್ರೇಮ. ಅವರ ಈ ಆಸೆಯನ್ನು ಪೂರೈಸಲು ನಾವೆಷ್ಟು ಕೆಲಸ ಮಾಡಿದರೂ ಸಾಲದು. ಸಾವಿರಾರು ಕತೆ, ಹಾಡುಗಳು ಅವರಿಗಾಗಿ ಬರೆಯಬೇಕಾಗಿವೆ.

ತುಸು ಪ್ರಾಯ ಬೆಳೆದ ಹುಡುಗರಿಗೆ ೧೨-೧೬ ವರ್ಷ ವಯಸ್ಸಿನವರಿಗೆ ಯಾವ ಸಾಹಿತ್ಯವೂ ನಮ್ಮಲ್ಲಿ ಕಂಡು ಬರುತ್ತಿಲ್ಲ. ಅವರಿಗೆ ಸಾಹಸ, ಪ್ರವಾಸ, ಅದ್ಭುತ ಜೀವನಗಳಲ್ಲಿನ ಮಮತೆಯನ್ನು ಕೆರಳಿಸುವ ಬರಹಗಳು ಉಂಟಾಗಬೇಕು. ಪ್ರಾಣಿಜೀವನದ ಕತೆಗಳು, ನಿಸರ್ಗದ ಕತೆಗಳು, ಪ್ರವಾಸದ ಕತೆಗಳು, ಭಿನ್ನ ನಾಡುಗಳ ಜೀವನದ ಕತೆಗಳು, ಮಾನವನ ಸಾಹಸಗಳನ್ನು ಚಿತ್ರಿಸುವ ಕತೆಗಳು, ನಮ್ಮ ಬಾಲಕರಿಗೆ ದೊರೆತರೆ ನಾಳೆ ಅವರು ಕನಸುಗಾರರೂ, ಸಾಹಸಿಗಳೂ ಆದಾರು. ಆದರೆ ನಮ್ಮ ಬರಹಗಾರರ ಪ್ರಯತ್ನ ಈ ವಿಷಯಗಳಲ್ಲಿಯೂ ದುರ್ಬಲವಾಗಿದೆ. ಪಂಜೆ, ರಾಜರತ್ನಂ, ಹೊಯ್ಸಳರಂತಹ ಕೆಲವು ಹೆಸರುಗಳು ಮಾತ್ರ ಕನ್ನಡದಲ್ಲಿ ಕೇಳುವಂತಾಗಿದೆ. ಬೆಳೆದವರ ಸಲುವಾಗಿಯೇನೋ ಕನ್ನಡ ಸಾಹಿತ್ಯದ ಮಟ್ಟಿಗೆ ವಿವಿಧ ಪ್ರಯತ್ನಗಳಾಗುತ್ತಿವೆ. ಆದರೆ ಒಂದು ಮರಿಯನ್ನು, ಅದು ಹುಟ್ಟಿದ ಮೂರು ನಾಲ್ಕು ವರ್ಷಗಳವರೆಗೆ ಸಮನಾಗಿ ಸಲಹದೆ, ಅನಂತರ ಪೋಷಣೆಗೆ ತೊಡಗಿದಂತೆ ಈ ಕೆಲಸ. ಬುಡದಲ್ಲಿ ಅದು ದುರ್ಬಲವಾಗಿ ಬೆಳೆದ ದೋಷವನ್ನು ಆ ಮೇಲಿನ ಪೋಷಣೆಯು ಸರಿಪಡಿಸಲಾರದು. ಮುದುರಿದ ಮನಸ್ಸು, ಊಹೆ, ಹೆಬ್ಬಯಕೆಗಳನ್ನು ಆ ಮೇಲೆ ನೀವೆಷ್ಟು ಕೆರಳಿಸುತ್ತೀರಿ? ಬೆಳೆಯಿಸುತ್ತೀರಿ? ವ್ಯಕ್ತಿ ಹೊಟ್ಟೆಯ

ಚಿಂತೆಗೆ ತೊಡಗುವಾಗ ನಾವು ನಮ್ಮ ಸಾಹಿತ್ಯವನ್ನು ಅವರಿಗೆ ಅರ್ಪಿಸುತ್ತಿದ್ದೇವೆ. ಆತನಿಗೆ - ಆಗ ಮುಖ್ಯವಾದ, ಗಹನವಾದ, ಯಾವ ಬಗೆಯ ಓದೂ ಹಿಡಿಸುವುದಿಲ್ಲ. ಒಂದಿಷ್ಟು ಲಘು ಬರಹ, ನಗೆ ಮಾತುಗಳ್ನು ಆತ ಓದಿಯಾನಷ್ಟೆ. ಜೀವನವನ್ನು ಎದುರಿಸಲು ಬೇಕಾಗುವ, ವಿವಿಧ ಜ್ಞಾನಕ್ಕೆ ಆತನಲ್ಲಿ ಆಸಕ್ತಿ ಉತ್ಸಾಹಗಳೆರಡೂ ಉಳಿದಿರುವುದಿಲ್ಲ.[೨]

ಮಕ್ಕಳ ಸಾಹಿತ್ಯವನ್ನು ಮುಖ್ಯವಾಗಿ ಶೈಶವ ಸಾಹಿತ್ಯ, ಬಾಲ ಸಾಹಿತ್ಯ, ಕೌಮಾರ ಸಾಹಿತ್ಯ ಎಂದು ಮೂರು ವಿಧಗಳಾಗಿ ಗುರುತಿಸುತ್ತಾರೆ. ಹಾಗೆಯೇ ಮತ್ತೊಂದು ರೀತಿಯಲ್ಲಿ ಮಕ್ಕಳೇ ರಚಿಸಿದ ಸಾಹಿತ್ಯ, ಮಕ್ಕಳಿಗಾಗಿ ಹಿರಿಯರು ರಚಿಸಿರುವ ಸಾಹಿತ್ಯ, ಮಕ್ಕಳನ್ನು ಕುರಿತು ಬಂದಿರುವ ಸಾಹಿತ್ಯ ಎಂಬ ವಿಭಾಗವನ್ನು ಮಾಡುತ್ತಾರೆ. ಮಕ್ಕಳೇ ರಚಿಸಿದ ಸಾಹಿತ್ಯ ಹಾಗೂ ಮಕ್ಕಳ ಸಾಹಿತ್ಯವನ್ನು ಕುರಿತು ಬಂದಿರುವ ಸಾಹಿತ್ಯ ಕನ್ನಡ ಸಾಹಿತ್ಯದಲ್ಲಿ ದೊಡ್ಡ ಪ್ರಮಾಣದಲ್ಲಿ ಬೆಳೆದಿಲ್ಲವೆಂಬುದು ಒಂದು ವಿಷಾದದ ಸಂಗತಿ. ಮಕ್ಕಳಿಗಾಗಿ ಹಿರಿಯರು ರಚಿಸುವ ಸಾಹಿತ್ಯವೇ ಕನ್ನಡದಲ್ಲಿ ಅಧಿಕವಾಗಿ ಅಭಿವ್ಯಕ್ತಗೊಂಡಿರುವುದನ್ನು ಕನ್ನಡ ಸಾಹಿತ್ಯ ಚರಿತ್ರೆ ತೆರೆದಿಡುತ್ತದೆ. ಹಾಗಾಗಿಯೇ ಕೆಲವು ಪ್ರಶ್ನೆಗಳು, ಅನುಮಾನಗಳು ಎದುರಾಗುತ್ತವೆ.

ಮಕ್ಕಳಿಗೆ ಸಾಹಿತ್ಯದ ಮೂಲಕ ಏನನ್ನು ಕೊಡಬೇಕು ಹಾಗೂ ಕೊಡಬಾರದು, ಅವರ ಭಾವಕೋಶ ವಿಕಸನಕ್ಕೆ ಅಗತ್ಯವಾದ ಸಂಗತಿಗಳಾವುವು, ಮೌಲ್ಯಗಳಾವುವು ಎಂಬ ಪ್ರಶ್ನೆ ಮುಖ್ಯವಾಗುತ್ತದೆ. ಅಂಥ ಸಂಗತಿಗಳನ್ನು, ಮೌಲ್ಯಗಳನ್ನು ಮಕ್ಕಳಲ್ಲಿ ಹಿರಿಯರು ಹೇರಲು ಅವರಿಗಿರುವ ಜವಾಬ್ದಾರಿ, ಹಕ್ಕಾದರೂ ಏನು ಎಂಬ ಪ್ರಶ್ನೆಗಳನ್ನು ಕೇಳಿಕೊಳ್ಳಬೇಕಾಗುತ್ತದೆ. ಏಕೆಂದರೆ ಭಾರತದ ಸಂದರ್ಭದಲ್ಲಿ ನಿರ್ಜಾತೀಯ, ನಿರ್ಮತೀಯ ಮೌಢ್ಯಗಳಿಂದ ಪ್ರಕ್ಷಿಪ್ತಗಳಿಂದ ಕೂಡಿರುವ ಸಾಹಿತ್ಯವೇ ಪ್ರಧಾನವಾಗಿ ಅಭಿವ್ಯಕ್ತಗೊಂಡಿದೆ. ಮತದ ದೆಸೆಯಿಂದ ಸಾಹಿತ್ಯ ಮಾತ್ರವಲ್ಲ ಮನುಷ್ಯ ಮನುಷ್ಯರ ನಡುವೆಯೇ ಅಸ್ಪೃಶ್ಯತೆಯಂಥ ಅಮಾನವೀಯ ಅಂತರಗಳನ್ನು ಸೃಷ್ಟಿಸಿದ ಸಂದರ್ಭಗಳೇ ಅಧಿಕ. ಹಾಗಾಗಿ ಕುವೆಂಪು ಅವರೇ ಹೇಳುವಂತೆ ಇತ್ತೀಚಿನ ತನಕ ನಡೆದು ಬಂದ ಸಾಹಿತ್ಯದ ಬಹುಭಾಗ ಮತರೋಗದಿಂದ ಅತ್ಯಂತ ಕಲುಷಿತಗೊಂಡು ಹಾನಿಕಾರಕವಾಗಿತ್ತೆಂಬುದನ್ನು ಮರೆಯುವಂತಿಲ್ಲ. ಸಾಹಿತ್ಯದ ರೂಪದಲ್ಲಿ ಅಸಹ್ಯವಾದದ್ದು, ಕೆಟ್ಟದ್ದು ಎಲ್ಲಾ ಸೇರಿಕೊಂಡು ಜನತೆಯನ್ನು ಮೌಢ್ಯ, ದಾಸ್ಯಗಳ ಕೂಪಕ್ಕೆ ನೂಕಿದೆ. ಸಾಹಿತ್ಯದ ಹೆಸರಿನಲ್ಲಿ ಮತಾಂಧರು ಕವಿಗಳೆಂದು ಕರೆಸಿಕೊಂಡಿದ್ದಾರೆ. ರೋಗಗ್ರಸ್ಥವಾದ ಮತೀಯ ವಾತಾವರಣದಿಂದ ಪಾರಾಗದಿದ್ದರೆ ಕನ್ನಡ ಸಾಹಿತ್ಯ ದೊಡ್ಡದಾಗುವುದಿಲ್ಲ. ನವೋನವವಾಗುವುದಿಲ್ಲ. ನಮಗೂ ಉಳಿಗತಿಯಿಲ್ಲ ಎಂಬ ಎಚ್ಚರ ಮಕ್ಕಳ ಸಾಹಿತ್ಯದ ಅಭಿವ್ಯಕ್ತಿ ಹಾಗೂ ಅಧ್ಯಯನದ ಸಂದರ್ಭದಲ್ಲಿ ಇರಬೇಕಾಗುತ್ತದೆ. ಏಕೆಂದರೆ ಮಕ್ಕಳಿಗಾಗಿ ಹಿರಿಯರು ರಚಿಸುವ ಸಾಹಿತ್ಯದಲ್ಲಿ ತಮ್ಮ ತಮ್ಮ ಸಾಂಸ್ಕೃತಿಕ ರಾಜಕಾರಣವೇ ಅಭಿವ್ಯಕ್ತಗೊಂಡಿರುತ್ತದೆ.

ಕುವೆಂಪು ಅವರು ಹೇಳಿದ ಮೇಲಿನ ಸಂಗತಿಗಳನ್ನು ಅಭಿವ್ಯಕ್ತಿಸುವ ಲೇಖಕರು ರಚಿಸುವ ಸಾಹಿತ್ಯ ಆಧುನಿಕ ಸಂದರ್ಭದಲ್ಲಿ ಹಲವು ಅನರ್ಥಗಳಿಗೆ ಹಾಗೂ ಮಕ್ಕಳಲ್ಲಿ ಸಂಕುಚಿತತೆಯ ಬೆಳವಣಿಗೆಗೆ ಮಾರಕವಾಗುತ್ತದೆ ಎಂಬ ವಿಚಾರದಲ್ಲಿ ಎರಡು ಮಾತಿಲ್ಲ. ಆದ್ದರಿಂದಲೇ ಆಧುನಿಕ ಸಾಹಿತ್ಯದ ಗೊತ್ತು ಗುರಿಗಳು ಏನಾಗಬೇಕೆಂಬ ಎಚ್ಚರವನ್ನು ಕುವೆಂಪು ಅಂತಹ ದಾರ್ಶನಿಕರು ಬಹು ಮುಖ್ಯ ಆಯಾಮವಾಗಿ ಚಿಂತಿಸಿದ್ದಾರೆ. ಶಂಭೂಕ, ಏಕಲವ್ಯ, ಹಿರಣ್ಯ ಕಶಿಪು, ಕೆರೆಗೆ ಹಾರ, ಗೋವಿನ ಹಾಡು ಮೊದಲಾದ ಕಥನಗಳಲ್ಲಿ ಮತೀಯ ಕೈವಾಡ ಯಾವ ರೀತಿಯಲ್ಲಿ ಕೆಲಸ ಮಾಡಿದೆ ಎಂಬ ಹುನ್ನಾರಗಳನ್ನು ಶೋಧಿಸುತ್ತಾರೆ. ಪ್ರಸ್ತುತ ಸಂದರ್ಭದಲ್ಲಿ ಮತೀಯ ಹಾಗೂ ಧಾರ್ಮಿಕ ಮೂಲಭೂತವಾದಿಗಳ ಮುಖವಾಣಿಗಳಂತೆ ಸಾಹಿತ್ಯ ರಚನೆಗೆ ತೊಡಗಿರುವ ಅನೇಕ ಲೇಖಕರು, ಸಂಶೋಧಕರು

ಇಂದು ತಮ್ಮ ಮೇಲಾಟವನ್ನು ನಡೆಸುತ್ತಿರುವ ಸಂದರ್ಭವೂ ಇದಾಗಿದೆ. ಭಾಷೆ, ದೇಶ, ಗಡಿ, ಜಾತಿ, ಮತ, ಧರ್ಮಗಳ ರೋಗಗ್ರಸ್ಥಗೊಂಡ ಮನಸ್ಸುಗಳು 'ಆವರಣ'ದಂಥ ಕೃತಿಗಳನ್ನು ಪ್ರಸ್ತುತ ಸಂದರ್ಭದಲ್ಲಿ ಸೃಷ್ಟಿಸಬಲ್ಲರೆಂಬುದನ್ನು ಇಲ್ಲಿ ಮರೆಯುವಂತಿಲ್ಲ. ಇಂಥ ಕೃತಿಗಳು ಎಳೆಯ ಮಕ್ಕಳ ಕೈಗೆ ಕೊಡಲು ಯೋಗ್ಯವಾದವುಗಳಲ್ಲ. ಇವು ಮಕ್ಕಳಲ್ಲಿ ಬೆಳೆಸಬೇಕಾದ ಜೀವಕೇಂದ್ರಿತ ಮೌಲ್ಯಗಳಾದ ಪ್ರೀತಿ, ಸ್ನೇಹ, ಸಹಬಾಳ್ವೆ, ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿಗಳನ್ನು ಬೆಳೆಸುವುದರ ಬದಲು ದ್ವೇಷವನ್ನು ಬೋಧಿಸುತ್ತವೆ. ಪ್ರೀತಿಗೆ ಬದಲು ಹಿಂಸೆಯನ್ನು ಉದ್ದೀಪಿಸುತ್ತವೆ. ಆತ್ಮಬಲ ಅಹಿಂಸೆಯ ಬದಲು ಹಿಂಸಾ ಬಲವನ್ನು ಪ್ರೇರೇಪಿಸುತ್ತವೆ.

ಅಂಥ ಸಾಹಿತ್ಯ ಮಕ್ಕಳ ಮನಸ್ಸನ್ನು ಪ್ರವೇಶಿಸಿದರೆ ಆಧುನಿಕ ವೈಜ್ಞಾನಿಕ ಅಭಿವೃದ್ಧಿಯ ನಾಗಾಲೋಟದಲ್ಲಿರುವ ಜಗತ್ತಿನಲ್ಲಿ ಆಗಬಹುದಾದ ಅನರ್ಥಗಳಿಗೆ ಕೊನೆಯೇ ಇಲ್ಲವೆಂಬ ಅಂಶವನ್ನು ಮನಗಂಡು ವಿಶ್ವಮಾನವ ಪ್ರಜ್ಞೆಯನ್ನು ಬೆಳೆಸುವ ಮಕ್ಕಳ ಸಾಹಿತ್ಯ ಹೆಚ್ಚು ಬರಬೇಕೆಂಬ ಅಭಿಲಾಷೆ ಕುವೆಂಪು ಅವರದು. ನಿರ್ಜಾತೀಯ - ನಿರ್ಮತೀಯವಾದ - ಮೌಢ್ಯ ದೂರವಾದ ಚಿರಂತನಾಂಶಗಳಿಂದ ವಿಶ್ವಮಾನವ ತತ್ವಗಳಿಂದ ಕೂಡಿದ್ದರೇನೇ ಸಾಹಿತ್ಯ ವಿಶ್ವಮಾನ್ಯವಾಗುತ್ತದೆ; ಉಳಿದದ್ದೆಲ್ಲ ತಿರಸ್ಕೃತವಾಗುತ್ತದೆ. ಅದು ದೀನ ದಲಿತರ, ಬಿದ್ದವರ, ನೊಂದವರ ನಾಲಗೆಯಾಗಬೇಕು; ನಾರಕೀಯವಾದ ಪಂಥ ಪದ್ಧತಿಗಳಿಂದ, ಅಮಾನವೀಯ ಶೋಷಕ ಪ್ರವೃತ್ತಿಗಳಿಂದ ಪ್ರಗತಿ ವಿರುದ್ಧವಾದ ಭಾವನೆಗಳಿಂದ ಪರಂಪರೆಯನ್ನು ಪಾರುಮಾಡಿ ಅದನ್ನು ಶುದ್ಧೀಕರಿಸಬೇಕು. ವೈಚಾರಿಕ ಮನೋಧರ್ಮ ಮತ್ತು ವೈಚಾರಿಕ ದೃಷ್ಟಿ ಮುಂದಿನ ಸಾಹಿತ್ಯಕ್ಕೆ ಎರಡು ಕಣ್ಣುಗಳಾಗಬೇಕು' ಎನ್ನುತ್ತಾರೆ.

ಹಾಗೆಯೇ ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿಗಳನ್ನು ಧ್ಯೇಯವಾಗಿಟ್ಟುಕೊಂಡು ವಿಶ್ವಮಾನವನ ದೃಷ್ಟಿಗೆ ಕಾರಣವಾಗುವ ಸಾಹಿತ್ಯಕ್ಕೆ ಮಾತ್ರ ಭವಿಷ್ಯವಿದೆ. ಮುಂದಿನ ಸಾಹಿತ್ಯ ಆ ದಿಶೆಯಲ್ಲಿ ನಡೆದರೆ ಮಾತ್ರ ಸರ್ವಮಾನ್ಯವಾಗುತ್ತದೆ. ಇಲ್ಲವಾದರೆ ಲೊಳಲೊಟ್ಟೆಯಾಗುತ್ತದೆ ಎನ್ನುತ್ತಾರೆ. ಒಂದು ಕಾಲದಲ್ಲಿ ಬಹು ದೊಡ್ಡ ಮೌಲ್ಯಗಳೆಂದು ಭಾವಿಸಿದ ಮೌಲ್ಯಗಳೇ ಮತ್ತೊಂದು ಕಾಲದಲ್ಲಿ ಆ ಹಿಂದಿನ ಮೌಲ್ಯಗಳು ಅಪಮೌಲ್ಯಗೊಳ್ಳಬಹುದು. ಹಾಗಾಗಿ ಕುವೆಂಪು ಅವರು ಹೇಳುವಂತೆ 'ನಾವು ದೊಡ್ಡವರು. ನಮ್ಮ ಮನುಷ್ಯತ್ವದ ದುರ್ಲಕ್ಷಣಗಳನ್ನೆಲ್ಲ ಆರೋಪಿಸುತ್ತೇವೆ. ಅವರು ಕಲಿಯುವ ಹಾಗೆ ಮಾಡುತ್ತೇವೆ' ಎನ್ನುತ್ತಾರೆ.

> ನಾನು ಹುಟ್ಟುವಾಗ ಹಿಂದುವಲ್ಲ, ಕ್ರೈಸ್ತನಲ್ಲ, ಮಹಮದೀಯನಲ್ಲ, ಜೈನನೂ ಅಲ್ಲ. ಏನೂ ಅಲ್ಲ. ನಾನೊಬ್ಬ ಮನುಷ್ಯ. ಆದರೆ ಬೆಳೀತಾ ಬೆಳೀತಾ ನನ್ನ ಸುತ್ತಿನ ಪ್ರತಿಯೊಬ್ಬನೂ ನನ್ನನ್ನ ಹಿಂದುವನ್ನಾಗಿ, ಅದರಲ್ಲೂ ಬ್ರಾಹ್ಮಣನೊ ಇಲ್ಲ ಶೂದ್ರನೊ ಆಗಿ, ಇಲ್ಲವೆ ಕ್ರೈಸ್ತನೊ, ಮಹಮದೀಯನೊ ಆಗಿ ಮಾಡ್ತಾರೆ. ಈ ಮತಗಳು ಮೊದಲು ಹುಟ್ಟುವಾಗ ಮಾನವರಲ್ಲಿ ಐಕ್ಯತೆಯನ್ನು ತರುವುದಕೋಸ್ಕರವಾಗಿ ಎಂದು ಹೇಳುತ್ತ ಹುಟ್ಟಿದವು ವಾಸ್ತವವಾಗಿ ಏನಾಯಿತು ಅಂದರೆ ಯಾವ ಮತಗಳು ಐಕ್ಯತೆಯನ್ನು ತರಬೇಕಿತ್ತೋ ಅವೇ ಭಿನ್ನತೆಯನ್ನು ತಂದು, ಅದರಿಂದಾಗಿ ದೊಡ್ಡ ದೊಡ್ಡ ಜಗಳಗಳು, ಯುದ್ಧಗಳು ನಮ್ಮ ದೇಶದಲ್ಲಿ ಆಗತಾ ಇವೆ. ಹಾಗೆ ಇತರ ದೇಶಗಳಲ್ಲೂ ಇದನ್ನು ಕಾಣಬಹುದು.[೩]

ಹಾಗಾಗಿ ಮಕ್ಕಳ ಸಾಹಿತ್ಯ ವೈಚಾರಿಕತೆಗೆ ಹೆಚ್ಚು ಮನ್ನಣೆಯನ್ನು ಕೊಡಬೇಕು. ಪ್ರಕ್ಷಿಪ್ತ ಅಮಾನವೀಯ ಕತೆಗಳನ್ನೆಲ್ಲ ತಂದು ಮಕ್ಕಳ ಸಾಹಿತ್ಯದಲ್ಲಿ ಸೇರಿಸಬಾರದೆನ್ನುತ್ತಾರೆ. ಉನ್ನತವಾದ, ಆದರ್ಶವಾದ ದೊಡ್ಡ ಗುಣಗಳನ್ನು

ಮಕ್ಕಳ ಸಾಹಿತ್ಯದಲ್ಲಿ ತಂದು ಹಾಕಬೇಕೆನ್ನುತ್ತಾರೆ. ಅದನ್ನು ಬಿಟ್ಟು ಸಂಕುಚಿತವಾದ ಕೀಳು ಅಭಿಪ್ರಾಯಗಳನ್ನು ಸೇರಿಸಿ ಆ ಮಕ್ಕಳ ಮುಗ್ಧ ಮನಸ್ಸನ್ನು ಕೆಡಿಸಬಾರದು. Brainwashing ಇಲ್ಲವೆ Indoctrination ಅಂತಾರಲ್ಲ ಆ ಕೆಲಸ ಮಾಡಬಾರದು. ಮಕ್ಕಳ ಮನಸ್ಸು ವಿಶಾಲಗೊಳ್ಳಬೇಕು ಎನ್ನುತ್ತಾರೆ.

ನಮ್ಮ ಪುರಾಣ, ಕಾವ್ಯಗಳಲ್ಲಿ ಮತ್ತೆ ಮತ್ತೆ ಎದುರಾಗುವ ಯುದ್ಧ, ಅಂಥ ಯುದ್ಧಗಳಿಂದ ದೊರೆಯಬಹುದಾದ ಸ್ವರ್ಗದ ಕಲ್ಪನೆಗಳು ಮುಂದೆ ಪ್ರತಿಯೊಂದು ದೇಶ ತನ್ನ ರಕ್ಷಣೆಗಾಗಿ ಯುದ್ಧವನ್ನೇ ದೊಡ್ಡ ಮೌಲ್ಯವಾಗಿ ಸ್ವೀಕರಿಸುವ ಅಪಾಯವೂ ಎದುರಾಗಬಹುದು ಎನ್ನುತ್ತಾರೆ. ಅಂಥ ಯುದ್ಧಗಳಿಂದ ಆಗಬಹುದಾದ ಆರ್ಥಿಕ ಹಾಗೂ ಪರಿಸರದ ಹಾನಿ, ಜೀವದ ಹಾನಿಯ ಬಗೆಗೆ ಮಕ್ಕಳಿಗೆ ಎಚ್ಚರಿಸಬೇಕೆನ್ನುತ್ತಾರೆ. ವಿಶ್ವಮಾನವ ಪ್ರಜ್ಞೆಯ ಶೋಧದ ಕುವೆಂಪು ಅವರು ಕನ್ನಡ, ಕರ್ನಾಟಕ, ಭಾರತದ ಮಕ್ಕಳ ಸಾಹಿತ್ಯದ ಬಗೆಗೆ ಮಾತ್ರವಲ್ಲದೆ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ವಿಶ್ವ ಮಕ್ಕಳ ಸಾಹಿತ್ಯ ಸಮ್ಮೇಳನದ ಮೂಲಕ ಮಕ್ಕಳಲ್ಲಿ ಹೊಸ ಎಚ್ಚರಗಳನ್ನು ಮೂಡಿಸಬೇಕಾದ ಅನಿವಾರ್ಯತೆಯನ್ನು ಶೋಧಿಸಿಕೊಳ್ಳುತ್ತಾರೆ. ಏಕೆಂದರೆ ಇಡೀ ವಿಶ್ವವೇ ಜಾಗತಿಕ ಗ್ರಾಮವಾಗಿರುವ ಈ ಸಂದರ್ಭದಲ್ಲಿ ಹೊಸ ಎಚ್ಚರದ ಅಗತ್ಯವನ್ನು ಒತ್ತಿ ಹೇಳುತ್ತಾರೆ.

> ಆ ವಿಶ್ವ ಮಕ್ಕಳ ಸಮ್ಮೇಳನದಲ್ಲಿ ಬೇರೆ ಬೇರೆ ದೇಶಗಳ, ಬೇರೆ ಬೇರೆ ಭಾಷೆಯ ಎಲ್ಲರಿಗೂ ಈ ಭಾವನೆ ಉಂಟಾಗುವಂತೆ ಮಾಡಬೇಕು - ಇನ್ನು ಮುಂದೆ ದೇಶ ದೇಶಗಳು ಪರಸ್ಪರ ಯುದ್ಧ ಮಾಡಿ ತಾವು ಸಂಪಾದಿಸಿದ್ದು, ಉತ್ಪತ್ತಿ ಮಾಡಿದ್ದು ಎಲ್ಲವನ್ನೂ ಮದ್ದು ಗುಂಡಿಗೆ, ವಿಮಾನ, ಟ್ಯಾಂಕು ಮುಂತಾದವಕ್ಕೆ ವ್ಯಯ ಮಾಡಿಕೊಂಡು, ಒಬ್ಬರನ್ನೊಬ್ಬರು ಕೊಲೆ ಮಾಡಿಕೊಂಡು ನಾಶವಾಗುವುದು ಬೇಡ; ಬದಲಾಗಿ ಒಬ್ಬರಿಗೊಬ್ಬರು ಸಹಾಯವಾಗಿ, ಮೈತ್ರಿಯಿಂದ ಬಾಳಬೇಕು ಅನ್ನುವುದನ್ನು ಎಲ್ಲಾ ದೇಶಗಳ ಚಿಕ್ಕಮಕ್ಕಳಿಗೆ ಮಾತ್ರವಲ್ಲ ಎಲ್ಲರಿಗೂ ಕಲಿಸಬೇಕು. ಆದ್ದರಿಂದ ಹಳೆಯ ಮೌಲ್ಯಗಳನ್ನು ಕುರಿತು ನೀವು ಬರೆಯುವಾಗ ಈ ಹೊಸದೃಷ್ಟಿಗೆ ಅನುಗುಣವಾಗುವಂತೆ ಅವನ್ನು ಪರಿವರ್ತಿಸಿ ಬರೆಯಬೇಕು.[೪]

ಹಾಗೆಯೇ ಚಿಕ್ಕಂದಿನಲ್ಲಿ ಮಕ್ಕಳು ಹಿರಿಯರ ಮಾರ್ಗದರ್ಶನದಂತೆ ನಡೆಯುವ ಅಗತ್ಯವನ್ನೂ ಲೋಕಾನುಭವವಿಲ್ಲದ ಮಗು ಹಲವು ಅಪಾಯಗಳಿಂದ ಪಾರಾಗಬೇಕಾದರೆ ಲೋಕಾನುಭವವಿರುವವರ ಬುದ್ಧಿವಾದ ಅಥವಾ ಅಂತಹ ಸಾಹಿತ್ಯ ಮಕ್ಕಳಿಗೆ ಅಗತ್ಯವೆನ್ನುತ್ತಾರೆ. ಅಂಥ ಸಾಹಿತ್ಯದಲ್ಲಿ ಚಿಕ್ಕಂದಿನಲ್ಲಿಯೇ ವಿಚಾರ ಪ್ರಜ್ಞೆಯನ್ನು ಕೆರಳಿಸುವ, ಸಂದೇಹಪಡುವ, ಸತ್ಯವನ್ನು ಒರೆಗಲ್ಲಿಗೆ ತಿಕ್ಕಿ ಸರಿ ತಪ್ಪನ್ನು ಪರಿಶೀಲಿಸುವ ಮನೋಧರ್ಮದ ಬೆಳವಣಿಗೆ ಮಕ್ಕಳಲ್ಲಿ ಮುಖ್ಯವಾಗಿ ಬೆಳೆಯಬೇಕೆನ್ನುತ್ತಾರೆ. ಇಂಥ ಮನೋಧರ್ಮ ಬೆಳವಣಿಗೆಯ ವಿಕಾಸಕ್ಕೆ ಪುಷ್ಟಿಕೊಡುವ ಅನೇಕ ಕವನಗಳು ಅವರ ಮರಿವಿಜ್ಞಾನಿ, ನನ್ನ ಮನೆ, ಮೇಘಪುರ, ಹಾಳೂರು ಮೊದಲಾದ ಮಕ್ಕಳಿಗಾಗಿ ರಚಿಸಿದ ಕೃತಿಗಳಲ್ಲಿ ಅಭಿವ್ಯಕ್ತಗೊಂಡಿದೆ. 'ವೈಚಾರಿಕ ಮನೋಧರ್ಮವನ್ನು ಬಾಲ್ಯದಲ್ಲಿಯೇ ಮಕ್ಕಳ ಮನಸ್ಸುಗಳಲ್ಲಿ ಬಿತ್ತಿದರೆ ಮತ ಕಲಹಗಳು, ಮತ ಮೌಢ್ಯಗಳು, ಸಂಕುಚಿತವಾದ ಹುಸಿ ಮತಾಭಿಮಾನದಿಂದ ಒದಗುವ ಅನ್ಯಮತ ದ್ವೇಷದಿಂದ ಉಂಟಾಗುತ್ತಿರುವ ಕ್ಷೋಭೆಗಳು ಲೋಕದಲ್ಲಿರುತ್ತಿರಲಿಲ್ಲ' ಎನ್ನುತ್ತಾರೆ.

> ಇಂದಿನ ಜಗತ್ತು ಹಿಂದಿನ ಜಗತ್ತಿನಂತಿಲ್ಲ. ಇಂದಿನ ಮಕ್ಕಳು ಹಿಂದಿನ ಮಕ್ಕಳಂತಿಲ್ಲ. ಇಂದಿನ ಮಕ್ಕಳಿಗೆ ಬೇಕಾಗುವ ವಿದ್ಯೆಯ ಸ್ವರೂಪ ಇಂದಿನ ವೈಜ್ಞಾನಿಕ ಜಟಿಲ ನಾಗರಿಕ ಜೀವನಕ್ಕೆ

ಹೊಂದಿಕೊಳ್ಳುವ ಪ್ರತಿಕ್ರಿಯೆಗೆ ಅವಶ್ಯಕವಾಗುವ ಲಕ್ಷಣದಿಂದ ಕೂಡಿರಬೇಕು. ಅದರಲ್ಲಿಯೂ ಭಾವಜೀವನಕ್ಕೆ ಸಂಬಂಧಪಡುವ ಮನೋಧರ್ಮದ ಲಕ್ಷಣ ಅತ್ಯಂತ ವೈಜ್ಞಾನಿಕವೂ ವೈಚಾರಿಕವೂ ಆಗಿರಬೇಕು. ಇನ್ನೂ ಮುಂದೆ ನಮ್ಮ ಮಕ್ಕಳು ಸಂಕುಚಿತ ಮತಭಾವನೆಗಳನ್ನೆಲ್ಲ ತಿರಸ್ಕರಿಸಿ ವಿಶಾಲ ಆಧ್ಯಾತ್ಮಕ್ಕೆ ಮಾತ್ರ ವಿದ್ಯಾರ್ಥಿಗಳಾಗಬೇಕು. ಲೋಕದ ಶಾಂತಿ ಸೌಖ್ಯಗಳಿಗೆ ಕಾರಣವಾಗುವ ಧರ್ಮವನ್ನು ವೈಚಾರಿಕತೆಯಿಂದ ಕಂಡುಕೊಂಡು ಮತಗಳನ್ನೆಲ್ಲ ಮತಿಯ ಒರೆಗಲ್ಲಿಗೆ ತಿಕ್ಕಬೇಕು. ಮತ ಜಾತಿಗಳನ್ನೆಲ್ಲಾ ತಮ್ಮ ಮನಸ್ಸಿನ ಹತ್ತಿರಕ್ಕೂ ಬರಕೊಡದೆ ದೂರೀಕರಿಸಬೇಕು 'ಅನಿಕೇತನ'ರಾಗಿ ವೈಚಾರಿಕತೆಯ ಅಡಿಗಲ್ಲಿನ ಮೇಲೆ ತಮ್ಮ ಅಭ್ಯುದಯ ನಿಃಶ್ರೇಯಸಗಳ ವೈಜ್ಞಾನಿಕ ಅಭೀಪ್ಸಾ ವೇದಿಕೆಗಳನ್ನು ನಿರ್ಮಿಸಿಕೊಳ್ಳಬೇಕು :[೫]

ತಮ್ಮ ಒಟ್ಟು ಸಾಹಿತ್ಯದ ವಿಚಾರಧಾರೆಯ ಬೀಜ ರೂಪದಂತಿರುವ ವಿಶ್ವಮಾನವ ಪರಿಕಲ್ಪನೆ ಅಥವಾ ಅನಿಕೇತನ ಪ್ರಜ್ಞೆಯ ಮಕ್ಕಳು ನಮ್ಮ ಪುಣ್ಯ ಭೂಮಿಯಲ್ಲಿ ಅವತರಿಸಬೇಕೆಂಬುದು ಕುವೆಂಪು ವಿರಚಿತ ಮಕ್ಕಳ ಕೃತಿಗಳ ಮಾನವೀಯ ಮೌಲ್ಯಗಳ ಶೋಧವಾಗಿದೆ. ಅಂಥ ಮೌಲ್ಯಗಳು ಅವರ ಮಕ್ಕಳ ಸಾಹಿತ್ಯದಲ್ಲಿ ವಿಭಿನ್ನ ನೆಲೆಗಳಲ್ಲಿ ಪ್ರಕಟಗೊಂಡಿರುವುದನ್ನು ಈ ಅಧ್ಯಯನ ಮುಂದೆ ವಿಶ್ಲೇಷಣೆಗೆ ಗುರಿಪಡಿಸುತ್ತದೆ.

**ಅಡಿಟಿಪ್ಪಣಿ :**

೧. ಪಂಜೆ ರಾಮರಾಯ (ಸಂ.), ಪಂಜೆಯವರ ಕೃತಿಗಳು ಪ್ರಬಂಧಗಳು ಮತ್ತು ಸಂಶೋಧನೆ, ಸಂಪುಟ - ೪, ಓರಿಯಂಟ್ ಲಾಂಗ್‌ಮನ್ ಲಿಮಿಟೆಡ್, ೧೯೭೩, ಪು - ೨೪ - ೨೭

೨. ಶಿವರಾಮ ಕಾರಂತ ; ಹುಚ್ಚು ಮನಸ್ಸಿನ ಹತ್ತು ಮುಖಗಳು, ಹರ್ಷ ಮುದ್ರಣ, ಪ್ರಕಟಣಾಲಯ, ಪುತ್ತೂರು, ದ.ಕ., ೧೯೪೮, ಪು - ೨೨೮

೩. ಶಿವಾರೆಡ್ಡಿ ಕೆ.ಸಿ. (ಸಂ.), ಕುವೆಂಪು ಸಮಗ್ರ ಗದ್ಯ ಸಂಪುಟ - ೨, ಪ್ರಸಾರಾಂಗ, ಕ.ವಿ.ವಿ., ಹಂಪಿ, ೨೦೦೪, ಪು. ೭೫೪ - ೭೫೫

೪. - ಅದೇ -, ಪು - ೭೫೬

೫. - ಅದೇ -, ಪು - ೭೫೬

* * *

# ೩. ಬಾಲ್ಯದಲ್ಲಿ ಸಾಹಿತ್ಯದ ಪ್ರಭಾವ ಮತ್ತು ಪರಿಣಾಮ

ಬಾಲ್ಯದಲ್ಲಿ ಸಾಹಿತ್ಯ ಮಗುವಿನ ವ್ಯಕ್ತಿತ್ವ ವಿಕಸನಕ್ಕೆ ಪರಿಣಾಮಕಾರಿಯಾದ ತಳಪಾಯವನ್ನು ಹಾಕುತ್ತದೆಯೆಂಬ ವಿಚಾರ ಅನೇಕ ಸಾಧಕರ ಅನುಭವಗಳಿಂದ ತಿಳಿದುಬರುವ ಸಂಗತಿಯಾಗಿದೆ. ವಿಶ್ವಕವಿ ರವೀಂದ್ರನಾಥ ಠಾಕೂರ್, ಭಾರತದ ಪಿತಾಮಹರೆಂದೇ ಹೆಸರಾದ ಮಹಾತ್ಮಗಾಂಧೀ ಮತ್ತು ರಾಷ್ಟ್ರಕವಿ ಕುವೆಂಪು ಅವರುಗಳು ತಮ್ಮ ಬಾಲ್ಯದಲ್ಲಿ ಸಾಹಿತ್ಯ ಕೃತಿಗಳು ಬೀರಿದ ಪ್ರಭಾವವನ್ನು ತಮ್ಮ ನೆನಪುಗಳಲ್ಲಿ ದಾಖಲಿಸಿದ್ದಾರೆ. ಅಂಥ ನೆನಪುಗಳು ತಮ್ಮ ಬಾಲ್ಯದಲ್ಲಿ ತಮ್ಮ ವ್ಯಕ್ತಿತ್ವ ವಿಕಸನಕ್ಕೆ ಹೇಗೆ ಬೀಜರೂಪದಲ್ಲಿ ನಿರಂತರವಾಗಿ ಕಾರ್ಯನಿರ್ವಹಿಸಿದವು ಹಾಗೂ ಸಾಧನೆಯ ಕಡೆಗೆ ಆದರ್ಶ ವ್ಯಕ್ತಿತ್ವ ಬೆಳವಣಿಗೆಗೆ ಸಹಾಯಕವಾದವು ಎಂಬುದನ್ನು ಕೆಲವು ಉದಾಹರಣೆಗಳ ಮೂಲಕ ಪರಿಶೀಲಿಸುವುದು ಉಪಯುಕ್ತವೆಂದು ಕಾಣುತ್ತದೆ. ಠಾಕೂರರ ಬಾಲ್ಯಕಾಲದ ಅನುಭವದ ಮಾತುಗಳನ್ನು ಇಲ್ಲಿ ಉದಾಹರಿಸುವುದು ಸೂಕ್ತವೆಂದು ಕಾಣುತ್ತದೆ.

ಮಕ್ಕಳನ್ನು ವಿನೋದಪಡಿಸುವ ಹಾಡುಗಳಲ್ಲಿ ಠಾಕೂರರು ತಮ್ಮ ಬಾಲ್ಯದಲ್ಲಿ ಸವಿದ ಸಾಹಿತ್ಯದ ಚಿರಸ್ಥಾಯಿಯಾದದ್ದನ್ನು ಈ ಕೆಳಕಂಡಂತೆ ಗುರುತಿಸಿದ್ದಾರೆ.

> 'ಟಪಟಪ ಬಂತು ಮಳೆ, ನದಿಯೊಳು ಬಂತು ನೆರೆ' ಎಂಬ ಹಾಡು ಬಾಲ್ಯ ಕಾಲದಲ್ಲಿ ನನಗೆ ಒಂದು ಮೋಹಮಂತ್ರದಂತಿತ್ತು. ಆ ಮೋಹವನ್ನು ನಾನು ಈಗಲೂ ಮರೆಯಲು ಸಮರ್ಥನಾಗಿಲ್ಲ. ನನ್ನ ಮನಸ್ಸಿನ ಆ ಮುಗ್ಧ ಸ್ಥಿತಿಯನ್ನು ನೆನಪಿಗೆ ತಂದುಕೊಂಡು ನೋಡದಿದ್ದರೆ, ಹಾಡಿನ ಸವಿಯೇನು ಪ್ರಯೋಜನವೇನು ಎಂಬುದನ್ನು ಸ್ಪಷ್ಟವಾಗಿ ಅರಿಯಲಾರೆ. ಇಷ್ಟು ಮಹಾಕಾವ್ಯ, ಖಂಡಕಾವ್ಯ, ತತ್ವ, ನೀತಿ, ಮನುಷ್ಯನ ಅಸಾಧ್ಯ ಪ್ರಯತ್ನ, ಮೈ ಬೆವರು ಸುರಿಯುವ ಕಸರಸ್ತು ಇವೆಲ್ಲಾ ನಿತ್ಯವೂ ಹೇಗೆ ನಿಷ್ಪ್ರಯೋಜನವಾಗುತ್ತ ಮರೆತು ಹೋಗುತ್ತ ಇವೆ, ಆದರೆ ಈ ಅಸಂಗತ ಅರ್ಥಹೀನ ಯಾದೃಚ್ಛಿಕ ಪದಗಳು ಹೇಗೆ ಜನರ ಜ್ಞಾಪಕದಲ್ಲಿ ಚಿರಕಾಲದಿಂದ ಹರಿಯುತ್ತ ಬಂದಿವೆ' ಎಂಬುದನ್ನು ಅರಿಯಲಾರೆ. ಈ ಹಾಡುಗಳಲ್ಲಿ ಒಂದು ಚಿರತ್ವವಿದೆ.[೧]
>
> ಜ್ಞಾಪಕವಿರುವುದೆಂದರೆ 'ಜಲ ಪಡೇ, ಪಾತಾ ನಡೇ' (ಹನಿ ಉದುರುವುದು, ಎಲೆ ಅದುರುವುದು) ಎಂಬುದು ಮಾತ್ರ. ಆಗ 'ಕರ, ಖಲ' ಮುಂತಾದ ಅಕ್ಷರ ಸಂಯೋಜನೆಯ ಬಿರುಗಾಳಿಯನ್ನು ಹಾದುಕೊಂಡು ಅದೇ ತಾನೇ ನೆಲೆಗೆ ಬಂದಿದೆ. ಆಮೇಲೆ 'ಜಲ ಪಡೇ ಪಾತಾ ನಡೇ' ಓದಿದೆ. ಅದೇ ನನ್ನ ಜೀವನದಲ್ಲಿ ಆದಿಕವಿಯ ಪ್ರಥಮ ಕವಿತೆ. ಆ ದಿನದ ಆನಂದ ಇಂದಿಗೂ ಜ್ಞಾಪಕಕ್ಕೆ ಬಂದಾಗ,

ಕವಿತೆಯಲ್ಲಿ ಪ್ರಾಸವೆಂಬ ವಸ್ತುವಿನ ಅವಶ್ಯಕತೆ ಏಕೆ ಎಂಬುದನ್ನು ತಿಳಿಯಬಲ್ಲೆ. ಪ್ರಾಸವಿರುವುದರಿಂದಲೇ ಪದ್ಯ ಮುಗಿದರೂ ಮುಗಿದಂತಾಗುವುದಿಲ್ಲ. ಅದನ್ನು ಹೇಳಿ ಮುಗಿಸಿದರೆ, ಅದರ ಝೇಂಕಾರ ನಿಲ್ಲುವುದಿಲ್ಲ. ಪ್ರಾಸವನ್ನು ತೆಗೆದುಕೊಂಡು ಕಿವಿಗೂ ಮನಸ್ಸಿಗೂ ಆಟ ನಡೆಯುತ್ತಿರುತ್ತದೆ. ಹೀಗೆ ತಿರುಗಿ ತಿರುಗಿ ಅಂದು ನನ್ನ ಸಮಸ್ತ ಚೈತನ್ಯದಲ್ಲಿಯೂ ಹನಿ ಉದುರುತ್ತಲೂ ಎಲೆ ಅದುರುತ್ತಲೂ ಇತ್ತು.

..... ಹುಡುಗನ ಮನಸ್ಸು ಮತ್ತವಾಗುತ್ತಿದ್ದದ್ದಕ್ಕೆ, ಕಣ್ಣೆದುರಿಗೆ ಬಣ್ಣಬಣ್ಣದ ಚಿತ್ರವಿಚಿತ್ರ ಆಶ್ಚರ್ಯ ಸುಖ ಚಿತ್ರ ಕಾಣುತ್ತಿದ್ದದ್ದಕ್ಕೆ, ಮೂಲ ಕಾರಣ ಆ ನಿರರ್ಗಳವಾಗಿಯೂ ವೇಗವಾಗಿಯೂ ಬರುತ್ತಿದ್ದ ಪದಪುಂಜ ಮತ್ತು ಲಯದ ಆಂದೋಲನ, ಶೈಶವದಲ್ಲಿ ಅನುಭವಿಸಿದ ಸಾಹಿತ್ಯರಸದ ಈ ಎರಡು ಸಂಗತಿಗಳು ಇಂದಿಗೂ ಜಾಗೃತವಾಗಿವೆ. ಮತ್ತು ಟಪಟಪ ಬಂತು ಮಳೆ, ನದಿಯೊಳು ಬಂತು ನೆರೆ' ಎಂಬುದೂ ಜ್ಞಾಪಕವಿದೆ. ಈ ಹಾಡು ಶೈಶವದ ಮೇಘದೂತದಂತೆ.[೨]

ಈ ಮೇಲಿನ ಉಲ್ಲೇಖ ಮಕ್ಕಳ ಮನಸ್ಸಿನಲ್ಲಿ ತಾನು ಕೇಳಿದ ಅಥವಾ ಓದಿದ ಸಾಲುಗಳನ್ನು ನೆನಪಿನಲ್ಲಿಟ್ಟುಕೊಳ್ಳುವಲ್ಲಿ ಪ್ರಾಸದ ಮಹತ್ವವೇನು ಎಂಬುದನ್ನು ತಿಳಿಯಪಡಿಸುತ್ತದೆ. ಕವಿತೆಯಲ್ಲಿ ಬರುವ ಪ್ರಾಸದ ಅಕ್ಷರ ಸಂಯೋಜನೆಯ ಬಿರುಗಾಳಿಯನ್ನು ಆಯ್ಕೆಮಾಡಿಕೊಂಡು ಮಗು ಆಕರ್ಷಿತಗೊಳ್ಳುತ್ತದೆಂಬುದು ಠಾಕೂರರ ಅನುಭವ. ಮಕ್ಕಳ ಸಾಹಿತ್ಯದಲ್ಲಿ ಹಾಡಿನ ನಾದ, ಲಯ, ರಂಜನೆ, ಕವಿತೆಯ ದೀರ್ಘತೆ, ಘಟನೆಗಳು, ಚಿತ್ರಗಳು ಮಗುವಿನ ಮನಸ್ಸನ್ನು ಆಕರ್ಷಿಸುತ್ತವೆ. ಮತ್ತು ತಾನು ಕೇಳುವ ವಿಷಯದ ಕಡೆಗೆ ಮನಸ್ಸನ್ನು ಕೇಂದ್ರಿಕರಿಸುವಲ್ಲಿ ಹೆಚ್ಚು ಸಹಾಯಕವಾಗುತ್ತದೆಂಬ ವಿಚಾರವು ಇಲ್ಲಿದೆ. ತಾವು ಬಾಲ್ಯದಲ್ಲಿ ಕೇಳಿದ ಹನಿ ಉದುರುವುದು ಎಲೆ ಅದುರುವುದು ಮಗುವಿನ ಜೀವನದಲ್ಲಿ ಆದಿಕವಿಯ ಪ್ರಥಮ ಕವಿತೆಯಾಗಿ ಹೇಗೆ ಚಿರತ್ವವನ್ನು ಪಡೆಯುತ್ತದೆಂಬ ಸಂಗತಿಯು ಇಲ್ಲಿ ಪ್ರಕಟವಾಗುತ್ತದೆ. ಆ ಚಿರತ್ವಕ್ಕೆ ಕಾರಣವಾದ "ಪದಪುಂಜ ಮತ್ತು ಲಯದ ಆಂದೋಲನ" ಮಕ್ಕಳ ಸಾಹಿತ್ಯದಲ್ಲಿ ಕಾಣಿಸುವುದರಿಂದಲೇ ಮಕ್ಕಳ ಮನಸ್ಸಿನಲ್ಲಿ ಸಾಹಿತ್ಯ ನೆಲೆನಿಲ್ಲಲು ಕಾರಣವಾಗುತ್ತದೆಂಬ ಸಂಗತಿಯು ಇಲ್ಲಿದೆ. ಹಾಗಾಗಿ ಮಕ್ಕಳ ಸಾಹಿತ್ಯಕ್ಕೆ ವ್ಯಕ್ತಿತ್ವವನ್ನು ರೂಪಿಸುವಲ್ಲಿ ವಿಶೇಷವಾದ ಬೆಲೆಯಿದೆ ಎಂಬುದು ತಿಳಿಯುತ್ತದೆ. ಅದೇ ಮಕ್ಕಳಲ್ಲಿ ಕ್ರಿಯಾಶೀಲತೆಯನ್ನು ಉದ್ದೀಪಿಸಿ ಅಭಿವ್ಯಕ್ತಿಗೆ ಹಚ್ಚುವ ಮಾರ್ಗವೂ ಆಗುತ್ತದೆ.

ಅಂತೆಯೇ ಗಾಂಧೀಜಿಯವರ ಆದರ್ಶ ವ್ಯಕ್ತಿತ್ವ ಬೆಳವಣಿಗೆಗೆ ಶಾಲೆಯ ಪಠ್ಯಕ್ರಮಕ್ಕಿಂತಲೂ ತಾನು ಓದಿದ ಹಾಗೂ ನೋಡಿದ ಎರಡು ನಾಟಕಗಳು ಹೆಚ್ಚು ಪರಿಣಾಮಕಾರಿಯಾದುವು. ತಮ್ಮ ಬಾಲ್ಯದಲ್ಲಿ ಶಾಲೆಯ ಪಠ್ಯಗಳನ್ನು ಬಿಟ್ಟು ಬೇರೇನನ್ನು ಓದಲು ಆಸಕ್ತರಾಗಿಲ್ಲದ ಗಾಂಧಿ ಶ್ರವಣನ ಪಿತೃಭಕ್ತಿ, ಹರಿಶ್ಚಂದ್ರ ನಾಟಕ ಕೃತಿಗಳನ್ನು ಅಕಸ್ಮಿಕವಾಗಿ ಓದಿದ್ದರಿಂದ, ನೋಡಿದ್ದರಿಂದ ತಮ್ಮ ಬದುಕಿನುದ್ದಕ್ಕೂ ಅವರ ಹೃದಯವನ್ನು ಸಜೀವಗೊಳಿಸಿದ ಪರಿಣಾಮವನ್ನು ಈ ಕೆಳಗಿನ ಉದ್ಧರಣೆಗಳಲ್ಲಿ ಕಾಣಬಹುದಾಗಿದೆ.

ನಮ್ಮ ತಂದೆಯವರು ಕೊಂಡು ತಂದಿದ್ದ 'ಶ್ರವಣ ಪಿತೃಭಕ್ತಿ' ನಾಟಕದ ಮೇಲೆ ನನ್ನ ಕಣ್ಣು ಬಿತ್ತು. ಬಹಳ ಅನುರಾಗದಿಂದ ಗಾಢತೆಯಿಂದ ಅದನ್ನು ಓದಿದೆ. ಆ ಸಮಯಕ್ಕೆ ಸರಿಯಾಗಿ ಒಂದು ದಿನ ಒಬ್ಬ 'ಕಾಶಿ - ಬೊಂಬಾಯಿ' ಚಿತ್ರಗಳ ಪೆಟ್ಟಿಗೆಯವನು ನಮ್ಮೂರಿಗೆ ಬಂದ. ಅವನು ತೋರಿಸಿದ ಚಿತ್ರಗಳಲ್ಲಿ ಯಾತ್ರಾರ್ಥವಾಗಿ ಶ್ರವಣ ತನ್ನ ತಂದೆ ತಾಯಿಯವರನ್ನು ಅಡ್ಡೆಯಲ್ಲಿ ಹೊರುತ್ತಿದ್ದ

ಚಿತ್ರ ಒಂದಿತ್ತು. ಆ ಪುಸ್ತಕ, ಈ ಚಿತ್ರ ಎರಡೂ ನನ್ನ ಮನಸ್ಸಿನಲ್ಲಿ ಆಳವಾಗಿ ನಾಟಿಕೊಂಡವು. 'ಇದೋ, ನಿನಗೊಂದು ಮೇಲ್ಪಂಕ್ತಿ' ಎಂದು ನನಗೆ ನಾನೇ ಹೇಳಿಕೊಂಡೆ. ಶ್ರವಣ ಸತ್ತಾಗ ಅವನ ತಾಯಿ ತಂದೆ ಮಾಡಿದ ವಿಲಾಪ ಈಗಲೂ ನನಗೆ ನೆನಪಿದೆ. ಎದೆ ಕರಗಿಸುವ ಆ ಧಾಟಿಯನ್ನು ಬಾರಿಸಲು ಕಲಿತೆ. ನನ್ನ ತಂದೆ ನನಗೆ ಕೊಂಡುಕೊಟ್ಟಿದ್ದ ರಾಗಮಾಲಿಕೆ ಒಂದು ಇತ್ತು. ಅದರಲ್ಲಿ ಅದನ್ನು ನುಡಿಸುತ್ತಿದ್ದೆ.

...... 'ಹರಿಶ್ಚಂದ್ರ' ನಾಟಕ. ನನ್ನ ಮನಸ್ಸನ್ನು ಆ ನಾಟಕ ಸೆಳೆಯಿತು. ಎಷ್ಟು ಸಲ ನೋಡಿದರೂ ಮತ್ತೆ ಮತ್ತೆ ಅದನ್ನು ನೋಡಲು ಮನಸ್ಸಾಗುತ್ತಿತ್ತು. ಆದರೆ ಎಷ್ಟು ಸಲ ಹೋಗಗೊಟ್ಟಾರು? ನನ್ನ ಮನಸ್ಸಿನಲ್ಲಿಯೆ ನಾನು ಹರಿಶ್ಚಂದ್ರ ನಾಟಕವನ್ನು ನೂರಾರು ಸಲ ಆಡಿರಬೇಕು. ಕನಸಿನಲ್ಲಿಯೂ ಅದೇ. 'ಹರಿಶ್ಚಂದ್ರನಂತೆ ಎಲ್ಲರೂ ಸತ್ಯವಾದಿಗಳಾಗಬಾರದೇಕೆ?' ಎಂಬುದೇ ಚಿಂತೆ ಹಗಲೂ ಇರುಳೂ. ಹಲವು ವಿಪತ್ತುಗಳನ್ನು ಅನುಭವಿಸಿ ಹರಿಶ್ಚಂದ್ರ ಸತ್ಯವನ್ನು ಪಾಲಿಸಲಿಲ್ಲವೆ, ಅದೇ ನಿಜವಾದ ಸತ್ಯಪಾಲನೆ. ಈ ಭಾವನೆ, ಆದರ್ಶ ಮೂಡಿತು ನನ್ನಲ್ಲಿ. ಹರಿಶ್ಚಂದ್ರ ನಿಜವಾಗಿಯೂ ಆ ಕಷ್ಟಗಳನ್ನು ಅನುಭವಿಸಿದನೆಂದು ನಾನು ನಂಬಿದೆ. ಆ ದುಃಖವನ್ನು ನೆನೆದು ನಾನು ಅಳುತ್ತಿದ್ದೆ. ಹರಿಶ್ಚಂದ್ರ ಐತಿಹಾಸಿಕ ವ್ಯಕ್ತಿಯಾಗಿದ್ದಿರಲಾರ ಎಂದು ಈಗ ನನ್ನ ಬುದ್ಧಿ ಹೇಳುತ್ತಿದೆ. ಅದೇನೇ ಇರಲಿ, ಈಗಲೂ ಹರಿಶ್ಚಂದ್ರ ಶ್ರವಣರು ನನ್ನ ಹೃದಯದಲ್ಲಿ ಸಜೀವರಾಗಿದ್ದಾರೆ. ಇಂದಿಗೂ ನಾನು ಆ ನಾಟಕಗಳನ್ನು ಓದಿದರೆ ಮತ್ತೆ ಅದೇ ರೀತಿ ಕಣ್ಣೀರು ಹಾಕದಿರಲಾರೆ ಎನಿಸುತ್ತದೆ.[೩]

ಶ್ರವಣನಂತೆಯೇ ಮಕ್ಕಳು ತಂದೆ-ತಾಯಿಯರಿಗೆ ತೋರಬೇಕಾದ ಪ್ರೀತಿ ಗೌರವಗಳು, ಮಕ್ಕಳು ಜೀವನದಲ್ಲಿ ಅವಶ್ಯವಾಗಿ ಅಳವಡಿಸಿಕೊಳ್ಳಬೇಕಾದ ಸೇವಾ ಮನೋಭಾವನೆ ತಮ್ಮ ಮನಸ್ಸಿನಲ್ಲಿ ಆಳವಾಗಿ ಬೇರು ಬಿಟ್ಟಿದ್ದನ್ನು ಇಲ್ಲಿ ಕಾಣುತ್ತೇವೆ. ಹಾಗೆಯೇ ಹರಿಶ್ಚಂದ್ರ ನಾಟಕ ಎಷ್ಟೇ ಕಷ್ಟಗಳು ಎದುರಾದರೂ ಸತ್ಯ ಮತ್ತು ನಿಷ್ಠೆಗೆ ಬದ್ಧರಾಗಿ ಬದುಕುವ ಬಗೆಯನ್ನು, ಆದರ್ಶವನ್ನು ಮೂಡಿಸಿದ್ದು ಸಾಮಾನ್ಯ ಸಂಗತಿಯಲ್ಲ. ಹಲವು ವಿಷಮ ಸನ್ನಿವೇಶಗಳಲ್ಲಿಯೂ ತಾನು ನಂಬಿದ ಸತ್ಯವನ್ನು ಬಿಡದೆ ಕಷ್ಟಗಳನ್ನು ಅನುಭವಿಸಿ ಲೋಕದ ಮೆಚ್ಚುಗೆಯನ್ನು ಪಡೆದ ಹರಿಶ್ಚಂದ್ರ ಗಾಂಧೀಜಿಯವರ ಬಾಲ್ಯದಲ್ಲಿಯೇ ವ್ಯಕ್ತಿತ್ವ ವಿಕಸನಕ್ಕೆ ಕಾರಣವಾದುದನ್ನು ಗಮನಿಸಬಹುದು. ಸಾಹಿತ್ಯ ಕೃತಿಗಳು ಬೀರುವ ನಿರಂತರ ಪ್ರಭಾವಗಳನ್ನು ಈ ಮೇಲಿನ ಉಲ್ಲೇಖಗಳು ಸೂಚಿಸುತ್ತವೆ./

ತಮ್ಮ ಹಿರಿಯರೊಬ್ಬರಿಂದ ಪರಿಚಿತವಾದ ಲಾಂಗ್‌ಫೆಲೊ ಕವಿಯ 'ದಿ ಸಾಮ್ ಆಫ್ ಲೈಫ್' ಎಂಬ ಕವಿತೆ ಕುವೆಂಪು ಅವರ ಬದುಕಿನ ರೂಪುರೇಷೆಯನ್ನು ಕಟ್ಟುವಲ್ಲಿ ತುಂಬಾ ಪರಿಣಾಮಕಾರಿಯಾದ ಪ್ರಭಾವ ಬೀರಿತೆಂಬುದನ್ನು ತಮ್ಮ ಆತ್ಮಕಥನದಲ್ಲಿ ದಾಖಲಿಸಿದ್ದಾರೆ. ವಿದ್ಯಾಭ್ಯಾಸದ ಮಹತ್ವ, ವಿದ್ಯೆಯಿಂದ ಒದಗುವ ಮನುಷ್ಯನ ಏಳ್ಗೆ, ವಿಚಾರ ಗ್ರಂಥಗಳಿಂದ ಮಗುವಿನ ಚೇತನ ವಿಕಾಸಗೊಂಡು ಅಭ್ಯುದಯಗೊಳ್ಳುತ್ತದೆ ಎಂಬುದು ಕುವೆಂಪು ಅವರ ದೃಢವಾದ ನಂಬಿಕೆ. ತಮ್ಮ ಬಾಲ್ಯದಲ್ಲಿ ತಮ್ಮ ಮೇಲೆ ಪ್ರಭಾವಬೀರಿದ ಇನ್ನಿತರ ಕೃತಿಗಳ ಬಗೆಗಿನ ವಿಚಾರಗಳನ್ನು 'ನೆನಪಿನ ದೋಣಿಯಲ್ಲಿ' ಕಾಣಬಹುದು.

ತಮ್ಮ ಹಿರಿಯರು ಹೇಳಿದಂತೆ ನಾವು ಜೀವನದಲ್ಲಿ ಹೇಗೆ ಸಾಗಬೇಕು. ಯಾವ ಮನೋಧರ್ಮದಿಂದ ಮುಂದೆ ನುಗ್ಗಬೇಕು ಎಂಬುದನ್ನು ಲಾಂಗ್‌ಫೆಲೊ ಕವಿಯ ಈ ಕವನ ಬೀರಿದ ಪ್ರಭಾವವನ್ನು ಈ ಕೆಳಕಂಡಂತೆ ಉಲ್ಲೇಖಿಸುತ್ತಾರೆ.

..... ನನ್ನ ಆತ್ಮಕ್ಕೆ ಚೈತನ್ಯಪೂರ್ಣವಾದ ಒಂದು ಮಂತ್ರ ದೀಕ್ಷೆಯನ್ನೆ ಕೊಟ್ಟಿತ್ತು ಆ ಕವಿತೆ. "ಜಗತ್ತು ಮತ್ತು ಜೀವನ ಬರಿಯ ಒಂದು ಶೂನ್ಯ ಸ್ವಪ್ನವಲ್ಲ. ಹಾಗೆಂದುಕೊಂಡು ನಿದ್ರಿಸುವ ಜೀವ ಸತ್ತಂತೆಯೇ ಸರಿ! ಬದುಕು ಮಿಥ್ಯೆಯಲ್ಲ; ಬದುಕು ಸುದೃಢ ಸತ್ಯ. ಪಂಚಭೂತಗಳಿಂದ ಹುಟ್ಟಿ ಬಂದ ನೀನು ಪಂಚಭೂತಗಳಲ್ಲಿ ಸೇರಿ ಹೋಗುತ್ತೀಯೆ ಎಂಬುದು ಆತ್ಮಕ್ಕಲ್ಲ; ಆ ಮಾತು ಅನ್ವಯವಾಗುವುದು ದೇಹಕ್ಕೆ. ನಮ್ಮ ದಾರಿ, ನಮ್ಮ ಗುರಿ, ಸುಖಕ್ಕೂ ಅಲ್ಲ, ದುಃಖಕ್ಕೂ ಅಲ್ಲ, ಕರ್ಮಕ್ಕೆ; ಕರ್ಮ ಮಾಡುವುದೆ ನಮ್ಮ ಕರ್ತವ್ಯ. ಇಂದಿಗಿಂತ ನಾಳೆ, ಒಂದೊಂದು ದಿನಕ್ಕೂ ನಮ್ಮ ದಾರಿ ಮುಂದುಮುಂದಕ್ಕೆ ಸಾಗುತ್ತಿರಬೇಕು. ವಿದ್ಯೆ, ಕಲೆ, ಜ್ಞಾನ ಇವು ಅನಂತ ಅಪಾರ. ನಮ್ಮ ಆಯುಸ್ಸಾದರೊ ಕ್ಷಣಿಕವೆಂಬಂತೆ ಮಿಂಚಿಹರಿಯುತ್ತಿದೆ. ಯಾವತ್ತಾದರೂ ಮೃತ್ಯುವಿನ ಕರೆಬರಬಹುದು ನಮಗೆ. ಆದ್ದರಿಂದ ಬದುಕಿನ ಕದನ ರಂಗದಲ್ಲಿ, ಮೂಕಪ್ರಾಣಿಗಳಂತಲ್ಲದೆ, ವೀರರಂತೆ ಹೋರುತ್ತಾ ಮುನ್ನುಗ್ಗಬೇಕು. ಭವಿಷ್ಯತ್ತಿನ ಸುಖ ಸ್ವಪ್ನ ನಂಬಿ ಕುಳಿತಿರಬಾರದು; ಹಾಗೆಯೇ ಕಳೆದ ಕಾಲದ ವೈಭವವನ್ನೆ ಮೆಲುಕು ಹಾಕುತ್ತಲೂ ಇರಬಾರದು; ಹಿಂದಕ್ಕೂ ನೋಡದೆ, ಮುಂದಕ್ಕೂ ಹಾಕದೆ, ಇಂದಿನದನ್ನು ಇಂದೆಯೆ ಮಾಡಿ ಪೂರೈಸಬೇಕು. ಹೃದಯದ ಧೈರ್ಯೋತ್ಸಾಹ ಕೆಡದೆ, ಭಗವಂತನಲ್ಲಿ ಶ್ರದ್ಧೆಯಿಟ್ಟು. ಇದಕ್ಕೆಲ್ಲ ನಮಗೆ ಮಾರ್ಗದರ್ಶಿಗಳಾಗಿದ್ದಾರೆ ಜಗತ್ತಿನ ಮಹಾಪುರುಷರು. ಅವರನ್ನನುಸರಿಸಿ ಅವರ ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ನಡೆದರೆ ನಮ್ಮ ಬದುಕು ಭವ್ಯವಾಗುತ್ತದೆ. ಆಳಿದ ಮೇಲೆ ನಾವೂ ಅವರಂತೆಯೇ ಕಾಲದ ಹೊಳೆಯ ಮರುಳು ದಿಣ್ಣೆಯ ಮೇಲೆ ನಮ್ಮ ಹೆಜ್ಜೆ ಗುರುತುಗಳನ್ನು ಬಿಟ್ಟು ಹೋಗಬಹುದು. ಬಹುಶಃ ನಮ್ಮ ತರುವಾಯ ನಮ್ಮ ಹಿಂದೆ ಸಂಸಾರ ಮಹಾಸಾಗರದಲ್ಲಿ ತೇಲುತ್ತಾ ಬರುವ ಯಾವನಾದರೊಬ್ಬ ಹಡಗೊಡೆದು ದಿಕ್ಕುಗೆಟ್ಟು ಬರುವ ಜೀವನ ಪ್ರಯಾಣಿಕನು ಆ ನಮ್ಮ ಹೆಜ್ಜೆ ಗುರುತುಗಳನ್ನು ಕಂಡು ಧೈರ್ಯತಂದುಕೊಂಡು ಮುಂಬರಿಯಬಹುದು. ಆದ್ದರಿಂದ ಎದ್ದೇಳು! ಕರ್ಮನಿರತನಾಗು! ಬಂದದ್ದೆಲ್ಲಾ ಬರಲಿ ! ಹೋಗುತ್ತಾ ಜಯಿಸುತ್ತಾ ಮುಂದುವರಿ! ಕರ್ಮಮಾಡುತ್ತಾ ತಾಳ್ಮೆಗೆಡದೆ ಕಾಯುವುದನ್ನು ಕಲಿ!"

ಆಲಿಸುತ್ತಾ ಆಲಿಸುತ್ತಾ ನನ್ನ ಜೀವ ಜ್ವಾಲಾಮಯವಾಯ್ತು. ನನ್ನ ಅಂತಶ್ಚೇತನಕ್ಕೊಂದು ಮೊತ್ತಮೊದಲನೆಯ 'ಉಪನಯನ' ವಾಯ್ತು! ಚೈತನ್ಯ ಕಣ್ಣು ಬಿಟ್ಟಿತು ಎಚ್ಚರಗೊಂಡು! "ಇನ್ನೆಲ್ಲಿಯ ನಿದ್ದೆ?"

..... ಆದರೆ ನನ್ನ ಬಾಲ್ಯದ 'ಗುರು'ವಾಗಿ ನನ್ನ ಚೇತನಕ್ಕೆ ಕಣ್ದೆರೆಯಿಸಿದ ಈ ಕವನ ನನ್ನ ಪ್ರಪ್ರಥಮ ದೀಕ್ಷಾಗುರುವಾಗಿಯೆ ನಿಂತಿದೆ![೪]

ಕುವೆಂಪು ಅವರ ಈ ಮೇಲಿನ ಉದ್ಧರಣೆ ತಮ್ಮ ಬಾಲ್ಯದಲ್ಲಿ ಗುರುವಾಗಿ ತನ್ನ ಚೇತನಕ್ಕೆ ಕಣ್ದೆರೆಸಿದ ಈ ಕವನ ಅವರ ಪ್ರಥಮ ದೀಕ್ಷಾ ಗುರುವಾಗಿ ಕಾರ್ಯ ನಿರ್ವಹಿಸಿದೆ. ಮಲೆನಾಡಿನ ಮೂಲೆಯ ಒಂದೇ ಮನೆಯ ಕುಗ್ರಾಮದಲ್ಲಿ ಹುಟ್ಟಿದ ಶಿಶುವೊಂದರಲ್ಲಿ ಹೊಸ ಎಚ್ಚರವನ್ನು ಉಂಟು ಮಾಡಿ ಉನ್ನತ ಧ್ಯೇಯೋದ್ದೇಶಗಳಿಂದ ಶಿಖರಪ್ರಾಯವಾಗಿ

ಬೆಳೆದ ಕುವೆಂಪು ಅವರ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ. ಅಂದರೆ ಮಕ್ಕಳ ಬಾಲ್ಯದಲ್ಲಿ ಉತ್ತಮ ಸಾಹಿತ್ಯದ ಮಹತ್ವವನ್ನು ಈ ಉದ್ಧರಣೆ ವಿವರಿಸುತ್ತದೆ.

ಹಾಗಾಗಿಯೇ ಪ್ರತಿಯೊಬ್ಬ ಮಗುವಿನ ಬಾಲ್ಯಕಾಲದಲ್ಲಿ ಸಾಹಿತ್ಯ ಮಹತ್ವದ ಪಾತ್ರ ವಹಿಸುತ್ತದೆಂಬುದನ್ನು ಅರಿತಿದ್ದರು. ಹಾಗಾಗಿ ಕುವೆಂಪು ಮಕ್ಕಳ ಸಾಹಿತ್ಯವನ್ನು ಮಹತ್ವದ ಅಭಿವ್ಯಕ್ತಿಯೆಂದು ಸ್ವೀಕರಿಸಿದಂತೆ ಕಾಣುತ್ತದೆ. ಆದ್ದರಿಂದ ಭಾರತದ ಸಂದರ್ಭದಲ್ಲಿ ಮಕ್ಕಳ ಮನಸ್ಸನ್ನು ರೂಪಿಸಲು ಯಾವ ಬಗೆಯ ಸಾಹಿತ್ಯವನ್ನು ರೂಪಿಸಬೇಕು. ಅದರಲ್ಲಿ ಪ್ರಕಟವಾಗುವ ಮೌಲ್ಯಗಳು ಏನಾಗಿರಬೇಕು ಎಂಬುದನ್ನು ತುಂಬಾ ಎಚ್ಚರಿಕೆಯಿಂದ ನಿರ್ವಹಿಸಿದ್ದರ ಬಗೆಯನ್ನು ಅವರ ಕೃತಿಗಳು ಪ್ರಕಟಿಸುತ್ತವೆ.

ಮಕ್ಕಳ ಸಾಹಿತ್ಯದಲ್ಲಿ ಆದರ್ಶವಾದ ಉದಾತ್ತವಾದ ಜೀವಕೇಂದ್ರಿತ ಮೌಲ್ಯಗಳು ಸ್ಥಾನ ಪಡೆಯಬೇಕೆಂದು, ಎಲ್ಲಾ ಬಗೆಯ ಸಂಕುಚಿತ ಅಭಿಪ್ರಾಯಗಳಿಂದ ಮಕ್ಕಳ ಮನಸ್ಸನ್ನು ಕೆಡಿಸಬಾರದೆಂದರು. ಬಾಲ್ಯದಲ್ಲಿ ನಮ್ಮ ಅನೇಕ ಪುರಾಣ ಮತ್ತು ಪುರಾಣ ಕೃತಿಗಳು ಮಕ್ಕಳ ಮನಸ್ಸನ್ನು ಸಂಕುಚಿತಗೊಳಿಸುವ ಕುಬ್ಜಗೊಳಿಸುವ ಅನರ್ಥಗಳ ಕಡೆಗೂ ಬೆಳಕು ತೋರಿದವು. ಮಕ್ಕಳ ಮನಸ್ಸು ವಿಶಾಲಗೊಳ್ಳಬೇಕಾದ ಕಡೆ ಇಂಥ ಪುರಾಣ ಕೃತಿಗಳು ಭಿತ್ತುವ, ನಿರ್ಮಾಣ ಮಾಡುವ ಅನರ್ಥಕಾರಿ ಸಂಗತಿಗಳ ಬಗೆಗೂ ಎಚ್ಚರಿಸಿದರು.

> ನಮ್ಮನ್ನು ಹಳೆಯ ಮೌಲ್ಯಗಳಿಂದ ಪಾರು ಮಾಡುವಂತಾಗಲಿ. ನಮ್ಮ ಮಕ್ಕಳನ್ನು ಎಷ್ಟರಮಟ್ಟಿಗೆ ನಾವು ಈ ಮತಗಳಿಂದ ಪಾರುಮಾಡುತ್ತೇವೆಯೋ ಅಷ್ಟರಮಟ್ಟಿಗೆ ನಾವು ಬದುಕುತ್ತೇವೆ. You must save our children from our religions. Let us have spirituality, but not religions. Spirituality is a fundamental scientific absolute truth. But religions are horrible. Every where they have created conflict, terror and bloodshed. ಅದಕ್ಕೋಸ್ಕರ ಮುಂದೆ ಬರುವ ನಮ್ಮ ಮಕ್ಕಳಿಗೆ ಈ ದೃಷ್ಟಿಯನ್ನು ಸ್ವಲ್ಪ ವೈಜ್ಞಾನಿಕವಾಗಿ ಕೊಟ್ಟರೆ ಲೇಸು ಅಂತ ನಾನು ಭಾವಿಸುತ್ತೇನೆ.[೫]

ಪ್ರಸ್ತುತ ಜಾಗತಿಕ ಸಂದರ್ಭದಲ್ಲಿ ಮತಧರ್ಮಗಳ ಮೂಲಭೂತತನದಿಂದ ಎದುರಾಗಿರುವ ಎಲ್ಲಾ ಬಗೆಯ ಭಯೋತ್ಪಾದನೆಗೆ ಕಾರಣವಾದ ಮೂಲ ನೆಲೆಗಳನ್ನೇ ಈ ಮೇಲಿನ ಕುವೆಂಪು ಅವರ ಮಾತುಗಳು ವಿಶೇಷಿಸುತ್ತವೆ. ನಮ್ಮ ಪುರಾಣ, ಕಥೆ, ಕಾವ್ಯಗಳಲ್ಲಿ ಯುದ್ಧದ ಭಾವನೆ ಎಲ್ಲಾ ಕಾಲ ಮತ್ತು ದೇಶದಲ್ಲಿ ಮುಖ್ಯವಾಗಿ ಪ್ರಕಟಗೊಳ್ಳುವುದು, ಅದನ್ನೇ ದೇಶದ ರಕ್ಷಣೆಯ ಮೌಲ್ಯವಾಗಿ ಪರಿಗಣಿಸುವುದು, ಅದೇ ಭಾವನೆಗಳನ್ನು ತಮ್ಮ ತಮ್ಮ ಮಕ್ಕಳಿಗೂ ಕಲಿಸುವುದು. ಆ ಮಕ್ಕಳೇ ಮುಂದೆ ದೊಡ್ಡವರಾಗಿ ಮತ, ಧರ್ಮ ಮತ್ತು ದೇಶಗಳ ರಕ್ಷಣೆಗಾಗಿ ಯುದ್ಧಗಳನ್ನು ಹೊತ್ತಿಸಿ ದೇಶದ ಸಾರ್ವಜನಿಕ ಸಂಪತ್ತು ಮತ್ತು ಜೀವ ಸಂಪತ್ತನ್ನು ದುರಂತಕ್ಕೀಡು ಮಾಡುವ ಸಂಗತಿಗಳನ್ನು ಕುವೆಂಪು ಅವರು ಅತ್ಯಂತ ಮಾರ್ಮಿಕವಾಗಿ ಇಂಥ ಕಡೆ ಚಿಂತಿಸುತ್ತಾರೆ. ಜಗತ್ತಿನ ಎಲ್ಲಾ ಮಕ್ಕಳಿಗೂ ಮಾನವೀಯವಾದ ಜೀವಕೇಂದ್ರಿತವಾದ ಮೌಲ್ಯಗಳನ್ನು ಬಿತ್ತುವ ಮಕ್ಕಳ ಸಾಹಿತ್ಯ ನಿರ್ಮಾಣಗೊಳ್ಳಬೇಕೆಂದು ಆಶಿಸುತ್ತಾರೆ.

ರಾಷ್ಟ್ರರಾಷ್ಟ್ರಗಳು ಪರಸ್ಪರ ಯುದ್ಧ ಮಾಡಿ ತಾವು ಸಂಪಾದಿಸಿದ್ದು, ಉತ್ಪತ್ತಿ ಮಾಡಿದ್ದು ಎಲ್ಲವನ್ನು ಮದ್ದು ಗುಂಡಿಗೆ, ವಿಮಾನ, ಟ್ಯಾಂಕು ಮುಂತಾದುವಕ್ಕೆ ವ್ಯಯ ಮಾಡಿಕೊಂಡು ಒಬ್ಬರನ್ನೊಬ್ಬರು ಕೊಲೆ ಮಾಡಿಕೊಂಡು

ನಾಶವಾಗುವುದು ಬೇಡ. ಬದಲಾಗಿ ಒಬ್ಬರಿಗೊಬ್ಬರು ಸಹಾಯವಾಗಿ ಮೈತ್ರಿಯಿಂದ ಬಾಳಬೇಕು ಎನ್ನುವುದನ್ನು ಎಲ್ಲಾ ದೇಶಗಳ ಚಿಕ್ಕ ಮಕ್ಕಳಿಗೆ ಮಾತ್ರವಲ್ಲ ಎಲ್ಲರಿಗೂ ಕಲಿಸಬೇಕು. ಆದ್ದರಿಂದ ಹಳೆಯ ಮೌಲ್ಯಗಳು ಆಧುನಿಕ ಸಂದರ್ಭದಲ್ಲಿ ಹೊಸ ದೃಷ್ಟಿಗೆ ಅನುಗುಣವಾಗಿ ಮಾರ್ಪಡಿಸಿ ಮಕ್ಕಳ ಸಾಹಿತ್ಯದಲ್ಲಿ ಅಭಿವ್ಯಕ್ತಗೊಳ್ಳಬೇಕೆಂದು ಸೂಚಿಸುತ್ತಾರೆ. ಇಂಥ ಮೌಲ್ಯಗಳು ತುಂಬಾ ಕಿರಿಯ ವಯಸ್ಸಿನಲ್ಲಿಯೇ ಮಕ್ಕಳ ಮನಸ್ಸಿನಲ್ಲಿ ಮೊಳಕೆಯೊಡೆಯುವುದರಿಂದ ಸಂಕುಚಿತ ಭಾವನೆಗಳಿಂದ ಹೊರಬಂದು ಅನಿಕೇತನರಾಗುವ, ವಿಶ್ವಮಾನವರಾಗುವ ಹೆಬ್ಬಯಕೆಯನ್ನು ಕುವೆಂಪು ಕಾಣುತ್ತಾರೆ.

**ಅಡಿಟಿಪ್ಪಣಿ :**

೧. ಕೃಷ್ಣಶಾಸ್ತ್ರೀ ಎ.ಆರ್., ರವೀಂದ್ರನಾಥ ಠಾಕೂರ್ ನಿಬಂಧಮಾಲಾ ಭಾಗ ೨, ಸಾಹಿತ್ಯ ಅಕಾಡೆಮಿ, ನವದೆಹಲಿ, ೧೯೬೩, ಪು - ೩೬೩

೨. – ಅದೇ –, ಪು - ೩೧-೩೮

೩. ಗಾಂಧೀ ಮೋ.ಕ., ಆತ್ಮಕಥೆ (ಸಂಕ್ಷಿಪ್ತ) ಮತ್ತು ಹಿಂದ್ ಸ್ವರಾಜ್ (ಅನು) ಸಿದ್ಧವನಹಳ್ಳಿ ಕೃಷ್ಣಶರ್ಮ ಗಾಂಧೀ ಸ್ಮಾರಕ ನಿಧಿ, ೧೯೫೮, ಪು - ೫-೬.

೪. ಕುವೆಂಪು; ನೆನಪಿನ ದೋಣಿಯಲ್ಲಿ ೧, ಸಹ್ಯಾದ್ರಿ ಪ್ರಕಾಶನ, ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು, ೧೯೮೦, ಪು - ೧೧೨-೧೧೫.

೫. ಶಿವಾರೆಡ್ಡಿ ಕೆ.ಸಿ. (ಸಂ.), ಕುವೆಂಪು ಸಮಗ್ರ ಗದ್ಯ, ಸಂಪುಟ - ೨, ಪ್ರಸಾರಾಂಗ, ಕ.ವಿ.ವಿ., ಹಂಪಿ, ೨೦೦೪, ಪು - ೧೫೧.

* * *

# ೪. ಅಮಲನ ಕಥೆ : ನಿರ್ಮಲ ಭಕ್ತಿ, ನಿಷ್ಠೆ, ಕರುಣೆ ಹಾಗೂ ಸತ್ಯದ ಶೋಧ

ತನ್ನ ಜೀವನೋಪಾಯಕ್ಕಾಗಿ ಒಣಕಟ್ಟಿಗೆಯನ್ನು ತರಲು ಕಾಡಿಗೆ ಹೋದ ಅಮಲ. ಬೇಡನೊಬ್ಬನು ಬೆನ್ನತ್ತಿ ಬರುವ ಜಿಂಕೆಯೊಂದನ್ನು ಬದುಕಿಸಲು ಭಾಷೆ ಕೊಟ್ಟು, ಆ ಭಾಷೆಗೆ ಬದ್ಧನಾಗಲು ಬೇಡನೊಡನೆ ಸೆಣಸಿ ಸೋತು ತಾನು ನಂಬಿದ ದೈವದ ಮೊರೆ ಹೋಗುತ್ತಾನೆ. ಕೊಟ್ಟ ಭಾಷೆಯನ್ನು ಈಡೇರಿಸಿಕೊಳ್ಳಲು ತಾನು ನಂಬಿದ ದೈವವನ್ನೇ ಭಿನ್ನವಿಸಿ, ಆ ದೈವವನ್ನೇ ಸಾಕ್ಷಾತ್ಕರಿಸಿಕೊಂಡ ದೀನ ದಲಿತನೊಬ್ಬನ ಕಥೆಯಿದು. ತಾನು ಕೊಟ್ಟ ಭಾಷೆಗೆ ತಪ್ಪಿ ನಡೆಯದೆ ನಿಷ್ಠೆ ನಿಯಮಗಳಿಂದ ದೈವದ ಮನಗೆದ್ದು ಉನ್ನತ ಪದವಿಯನ್ನು ಪಡೆದ ಶ್ರೀಸಾಮಾನ್ಯನ ನಿರ್ಮಲ ಚಿತ್ರವಿದು.

ಅಮಲನ ಕಥೆ ೧೯೨೬ರಲ್ಲಿ ರಚಿತಗೊಂಡು ೧೯೨೪ರಲ್ಲಿ ಪ್ರಕಟವಾಗಿದೆ. ಕೃತಿ ರಚನೆಯಾದ ವರ್ಷದ ಬಗ್ಗೆ ಸ್ವತಃ ಕುವೆಂಪು ಅವರೇ ತಮ್ಮ ನೆನಪಿನ ದೋಣಿಯ ಅಡಿಟಿಪ್ಪಣಿಯಲ್ಲಿ ಹೀಗೆ ಸ್ಪಷ್ಟಪಡಿಸಿಕೊಂಡಿದ್ದಾರೆ. "ನಾನು ಕನ್ನಡದಲ್ಲಿ ಬರೆಯತೊಡಗಿದುದು ಶ್ರೀಯುತ ಕಸಿನ್ಸ್ ಅವರನ್ನು ಕಂಡ ಮೇಲೆಯೆ ಎಂಬುದು ಪೂರ್ತಿ ನಿಜವಲ್ಲ. ಅಮಲನ ಕಥೆಯನ್ನು ಅದಕ್ಕೆ ಮುಂಚೆಯೆ ೧೯೨೬ರಲ್ಲಿ ಬರೆದಿದ್ದೇನೆ"[೧] ಎನ್ನುತ್ತಾರೆ. ಗೋವಿನ ಹಾಡು ಲಯದಲ್ಲಿ ಮೂಡಿಬಂದಿರುವ ಈ ನೀಳ್ಗವನವು ಜನಪದ ಲಯಗಾರಿಕೆಯನ್ನು ಒಳಗೊಂಡಿದೆ. ಸರಳಭಾಷೆ, ಪದಸಂಪತ್ತು, ಅತ್ಯುತ್ತಮ ಶೈಲಿಯಿಂದ ಕವನ ಹೆಚ್ಚು ಆಕರ್ಷಿತವಾಗಿದೆ.

ಅಮಲನ ಜೀವನದ ಒಂದು ದಿನದ ಬದುಕಿನ ಕಥೆಯನ್ನು ಮಕ್ಕಳ ಮುಂದಿಡುತ್ತಾ ಉದಾತ್ತ ನೀತಿಯೊಂದನ್ನು, ತತ್ವವೊಂದನ್ನು ಮಕ್ಕಳಲ್ಲಿ ಭಿತ್ತಲು ಇಲ್ಲಿ ಪ್ರಯತ್ನಿಸಿದ್ದಾರೆ. ಸೂರ್ಯೋದಯಕ್ಕೆ ಮುನ್ನ ಆರಂಭವಾಗುವ ಅಮಲನ ದೈನಂದಿನ ಬದುಕಿನ ವಿವರಗಳ ಜೊತೆಯಲ್ಲಿಯೇ ಅವನ ಕೌಟುಂಬಿಕ ಚಿತ್ರ, ಆ ಕುಟುಂಬದ ಬಡತನದ ಚಿತ್ರವನ್ನು ಕಟ್ಟಿಕೊಡುತ್ತಾರೆ. ಅಮಲ ಸೂರ್ಯೋದಯಕ್ಕೆ ಮುನ್ನ ಕಾಡಿಗೆ ಹೊರಟಾಗ ಕಾಣುವ ನಿಸರ್ಗದ ಅಸಂಖ್ಯ ವಿಸ್ಮಯಗಳ ಚಿತ್ರಗಳು ಮಕ್ಕಳ ಮುಂದೆ ಚಿತ್ರಪಟದಂತೆ ಬಿಚ್ಚಿಕೊಳ್ಳುತ್ತವೆ. ದೈವದ ಮಹತ್ವ ಮತ್ತು ಶಕ್ತಿ, ಸೃಷ್ಟಿಯ ವೈವಿಧ್ಯತೆಗಳ ವರ್ಣನೆ ಮಕ್ಕಳ ಭಾವಕೋಶವನ್ನು ತುಂಬಲು ಅತ್ಯಂತ ಸಮರ್ಥವಾಗಿದೆ. ಅಮಲನು ಕಂಡ ಮಲೆನಾಡಿನ ಸಮೃದ್ಧ ಪರಿಸರದ ಸಸ್ಯರಾಶಿ, ಅ ಸಸ್ಯರಾಶಿಯಲ್ಲಿ ಅರಳಿ ನಿಂತ ಬಗೆ ಬಗೆಯ ಹೂಗಳ ವರ್ಣನೆ, ಪರಿಚಯ, ಆ ಹೂಗಳಿಂದ ಎಲ್ಲೆಲ್ಲೂ ಹಬ್ಬಿರುವ ಪರಿಮಳದ ವಿವರಗಳು ಆಕರ್ಷಕವಾಗಿವೆ. ಸೂರ್ಯೋದಯದೊಂದಿಗೆ ನಿಸರ್ಗದಲ್ಲಿ ಕಾಣುವ ಸೌಂದರ್ಯದ ಜೊತೆಗೆ ಇಡೀ ನಿಸರ್ಗವೇ ಬಣ್ಣಬಣ್ಣದ ಹೂಗಳಿಂದ, ಪಶು ಪಕ್ಷಿಗಳಿಂದ, ಕ್ರಿಮಿಕೀಟಗಳಿಂದ ಜೀವಂತಗೊಳ್ಳುವ ಚಿತ್ರಗಳನ್ನು ಮಕ್ಕಳ ಮನೋಪಟಕ್ಕೆ ತುಂಬಿಸುವ ಕಾರ್ಯವನ್ನು ಕವಿ ಇಲ್ಲಿ ಮಾಡಿದ್ದಾರೆ.

ಈ ಎಲ್ಲಾ ಪಶುಪಕ್ಷಿ, ಕ್ರಿಮಿಕೀಟಗಳ ಬದುಕಿನ ಕ್ರಮಗಳನ್ನು ಸಣ್ಣ ಸಣ್ಣ ಸಾಲುಗಳ ನಾಲ್ಕು ಸಾಲಿನ ಪದ್ಯಗಳಲ್ಲಿ ಕಟ್ಟಿಕೊಡುವ ಕ್ರಮವು ಅನನ್ಯವಾದುದು. ಅಮಲನ ಪಯಣದ ಜೊತೆಗೆ ಮಲೆನಾಡಿನ ಸಮಷ್ಟಿ ಬದುಕಿನ ವಿವರಗಳು, ನಿಸರ್ಗದ ಸಚರಾಚರಗಳ ಚಿತ್ರಗಳನ್ನು ಮಕ್ಕಳ ಮುಂದಿಡುತ್ತಾರೆ. ಹಾಗೆಯೇ ಅಮಲನಂಥ ಶ್ರೀ ಸಾಮಾನ್ಯನ ನೈಜಭಕ್ತಿಯ ವಿವರಗಳು, ತಾನು ನಂಬಿದ ದೈವದಲ್ಲಿನ ಅವನ ನಂಬಿಕೆಗಳ ಚಿತ್ರಗಳು ಇಲ್ಲಿವೆ. ದೈವನೊಡ್ಡುವ ಪರೀಕ್ಷೆಯಲ್ಲಿ ಅಮಲನು ಜಯಿಸುವ ಕ್ರಮವು ಈ ಕವನದಲ್ಲಿ ಪರಿಣಾಮಕಾರಿಯಾಗಿದೆ. ಬೇಡನೊಬ್ಬನು ಬೆನ್ನಟ್ಟಿಬರುವ ಹರಿಣನ ಹರಣವನ್ನು ರಕ್ಷಿಸಲು ನಿಂತ ಸಂದರ್ಭದಲ್ಲಿ ಅಮಲನಿಂದ ಕರುಣೆಯ ಬಗ್ಗೆ ನುಡಿಸಿರುವ ತತ್ವವು ಮಾರ್ಮಿಕವಾಗಿದೆ. ಭಾರತೀಯ ಸಂಸ್ಕೃತಿಯಲ್ಲಿ ಘನೀಕೃತಗೊಂಡಿರುವ ಕರುಣೆಯ ಮಹತ್ವವನ್ನು ಅನೇಕ ಉಪಮೆಗಳ ಮೂಲಕ ಮಕ್ಕಳ ಮನಸ್ಸು ಹೊಕ್ಕುವಂತೆ ಕುವೆಂಪು ನಡೆಸುತ್ತಿರುವ ಸಾಂಸ್ಕೃತಿಕ ಜವಾಬ್ದಾರಿಯು ಇಂಥ ಕಡೆ ತೀವ್ರವಾಗಿ ಪ್ರಕಟವಾಗುತ್ತದೆ. ಆ ಕವಿತೆಯ ಕೆಲ ಪದ್ಯಗಳನ್ನು ಇಲ್ಲಿ ಉದ್ಧರಿಸುವುದು ಉಪಯುಕ್ತವೆಂದು ಕಾಣುತ್ತದೆ.

ಧರಣಿಯೊಳಗಿಹ ಜೀವರೊಳಗೆ,
ಇರುಳು ಚಲಿಸುವ ಅಸುರರೊಳಗೆ,
ನರನು ಪತಮನು ಎಂದು ಉಸುರಲು
ಕರುಣೆ ಎಂಬುದೆ ಸಾಕ್ಷಿಯು!
ಕರುಣೆ ಎಂಬುದು ದೇವ ದೇವನ
ಪರಮ ಸನ್ನಿಧಿಯಿಂದ ಬರುವುದು!
ಕರುಣೆ ಎಂಬುದೆ ನರರು ಸುರರೊಳು
ಹರಿಯ ನಾಮದಿ ಚರಿಪುದು!
ಕರುಣೆಯೆಂಬುವ ಮುಕುಟಕಿಂತಲು
ದೊರೆಗೆ ಬೇರೆಯ ಮುಕುಟವಿರುವುದೆ?
ಕರುಣೆ ಎಂಬ ಖಡ್ಗಕ್ಕಿಂತಲು
ಪರಮ ಖಡ್ಗವು ಇರುವುದೆ?
ಅರಸರೊಳಗದು ಮುಕುಟ ರೂಪದಿ,
ಪುರುಷರೊಳಗದು ವೀರ ರೂಪದಿ,
ತರುಣಿಯೊಳಗದು ಪುಷ್ಪ ರೂಪದಿ,
ಕರುಣೆಯೆಂಬುದು ಮೆರೆವುದು.[೨]

ಕರುಣೆಯೆಂಬುದು ದೇವದೇವನ ಪರಮ ಸನ್ನಿಧಿಯಿಂದ ಬರುವುದೆಂದು, ನರ ಮತ್ತು ಸುರರಲ್ಲಿ ದೈವದ ನಾಮದಿಂದ ಚಲಿಸುವುದೆಂದು, ದೊರೆಗೆ ಕರುಣೆಗಿಂತ ದೊಡ್ಡ ಮುಕುಟವಿಲ್ಲವೆಂದು, ಕರುಣೆಯೇ ಪರಮ ಖಡ್ಗವೆಂದು, ಪುರುಷರಲ್ಲಿ ವೀರತ್ವದಲ್ಲೂ, ತರುಣಿಯರಲ್ಲಿ ಪುಷ್ಪರೂಪದಲ್ಲೂ ಕರುಣೆ ಕಾಣುವುದೆಂದು ಅದರ ಮಹತ್ವವನ್ನು ಬೋಧಿಸುತ್ತಾರೆ.

ಮನುಷ್ಯ ಶಕ್ತಿಯೊಂದು ಅಸಹಾಯಕತೆಯ ಸಂದರ್ಭದಲ್ಲಿ ತಾನು ನಂಬಿದ ದೈವವನ್ನೇ ಕಡೆಗೆ ಸಾಕ್ಷಾತ್ಕರಿಸಿಕೊಳ್ಳುವ ಪರಿಯನ್ನು ಈ ಕವನದಲ್ಲಿ ಮುಖ್ಯ ಮೌಲ್ಯವಾಗಿ ಚಿತ್ರಿಸಿದ್ದಾರೆ. ಭಕ್ತಿಯ ತೀವ್ರತೆ ಮತ್ತು ಶ್ರದ್ಧೆಯನ್ನು ಮಕ್ಕಳಲ್ಲಿ ಬೆಳೆಸುವ ಅಭೀಪ್ಸೆಯು ಇಲ್ಲಿ ಮುಖ್ಯವಾಗಿದೆ. ಅಮಲನಂತೆಯೇ ಅಮಲನ ಮಗ ಮಧುರನ ಸಾಹಸ ಹಾಗೂ ಭಕ್ತಿಯ ಚಿತ್ರಗಳು ಕಥನದಲ್ಲಿ ಮುಖ್ಯ ಆಯಾಮವಾಗಿ ಮೂಡಿ ಬಂದಿವೆ. ಮಧುರನ ಧೈರ್ಯ ಮತ್ತು ಸಾಹಸ ಪ್ರಜ್ಞೆಗೆ ಅಮಲನೇ ಮಾದರಿಯಾಗಿದ್ದಾನೆ. ಮಧುರನು ತನ್ನ ತಂದೆಯ ಶೋಧಕ್ಕಾಗಿ ಕತ್ತಲೆಯಲ್ಲಿ ಹೊರಟ ಪಯಣ ಮಕ್ಕಳಲ್ಲಿ ದೃಢತೆ ಮತ್ತು ಧೈರ್ಯವನ್ನು ಬೆಳೆಸುವ ದೊಡ್ಡ ಮೌಲ್ಯವಾಗಿ ಇಲ್ಲಿ ಪ್ರಕಟಗೊಂಡಿದೆ. ಕಾರ್ಗತ್ತಲೆಯಲ್ಲಿ ಪೊಂಜನ್ನು ಹೊತ್ತಿಸಿಕೊಂಡು ತಂದೆಯನ್ನು ಹುಡುಕಲು ಹೊರಡುವ ಚಿತ್ರ ಪರಿಣಾಮಕಾರಿಯಾಗಿದೆ. ಮಲೆನಾಡಿನ ದಟ್ಟವಾದ ಕಾಡಿನ ನಡುವೆ ನಡೆಯುವ ಇವನ ಪಯಣ ಸಾಹಸಕ್ಕೆ ಒಂದು ನಿದರ್ಶನ. ಇದು ಮಕ್ಕಳಲ್ಲಿ ಕಷ್ಟ ಸಹಿಷ್ಣುತೆ ಮತ್ತು ಆತ್ಮವಿಶ್ವಾಸವನ್ನು ಬೆಳೆಸುತ್ತದೆ. ಮಧುರನ ನಿಷ್ಕಾಭಕ್ತಿಗೆ ದೇವರು ಸಾಕ್ಷಾತ್ಕಾರಗೊಳ್ಳುವುದು, ಹಾಗೆ ಸಾಕ್ಷಾತ್ಕಾರಗೊಂಡ ಸಂದರ್ಭದಲ್ಲಿ ಭಕ್ತಿ ಮತ್ತು ದೈವವನ್ನು ಕುರಿತ ವಿಚಾರಗಳು ಪಾರಂಪರಿಕ ದೈವದ ಕಲ್ಪನೆಯನ್ನು ಮುರಿದು ಹೊಸ ಪರಿಕಲ್ಪನೆಯನ್ನೇ ಇಲ್ಲಿ ಕಾಣಿಸುತ್ತವೆ. ದೈವ ಸಾಕ್ಷಾತ್ಕಾರದ ನಂತರ ಹಿಂತಿರುಗಿದ ಮಧುರನು ಕಾಣುವ ಲೋಕದ ಚಿತ್ರಗಳು ಹೊಸ ತತ್ವವೊಂದನ್ನು ಬಿಚ್ಚಿಡುತ್ತವೆ.

ಅಲ್ಲಿ ದುಃಖದ ಕೂಗು ಇಲ್ಲವು
ಅಲ್ಲಿ ಹಣದ ಜಗಳವಿಲ್ಲವು,
ಅಲ್ಲಿ ಜನನವು ಮರಣವಿಲ್ಲವು;
ಅಲ್ಲಿ ಢಂಬವು ಸೇರದು!
ಮೋದವಿಲ್ಲವು ಚಿಂತೆಯಿಲ್ಲವು
ಆದಿ ಅಂತ್ಯಗಳೆರಡು ಇಲ್ಲವು;
ವೇದ ತತ್ವದ ನೆಲೆಯು ತಾನದು
ಓದಿ ತಿಳಿಯಲಸಾಧ್ಯವು
ಜಾತಿ ಭೇದಗಳಲ್ಲಿ ಇಲ್ಲವು!
ನೀತಿ ನಡತೆಗಳಲ್ಲಿ ಪರಮವು
ಖ್ಯಾತಿ ಎಂಬುದನಲ್ಲಿ ಬಯಸರು
ಪ್ರೀತಿ ಎಂಬುದು ಶ್ರೇಷ್ಠವು.
ನೇಮ ನಿಯಮಗಳಲ್ಲಿ ಇಲ್ಲವು,
ಕಾಮ ಲೋಭಗಳಲಿ ಸೇರವು,
ಭೀಮ ಭುಜಬಲವಲ್ಲಿ ವಿಫಲವು,
ಪ್ರೇಮವೆಂಬುದೆ ಶ್ರೇಷ್ಠವು.[೩]

ಈ ಮೇಲಿನ ಉದ್ಧರಣೆಯಲ್ಲಿ ಒಂದು ಆದರ್ಶ ರಾಜ್ಯವೇ ಕಣ್ಣ ಮುಂದೆ ನಿಲ್ಲುತ್ತದೆ. ಇದೇ ಕುವೆಂಪು ಅವರು ತಮ್ಮ ಜೀವನದುದ್ದಕ್ಕೂ ಶೋಧಿಸಿಕೊಂಡ ಮಹತ್ವದ ಅನಿಕೇತನ ತತ್ವ. ಆ ತತ್ವ ತಮ್ಮ ಮೊದಲ ಕೃತಿಯಾದ ಅಮಲನಕಥೆಯಲ್ಲಿಯೇ ಬೀಜರೂಪದಲ್ಲಿ ಅಡಗಿರುವುದನ್ನು ಕಾಣಬಹುದಾಗಿದೆ. ಇಂಥ ತತ್ವವು ಸಾಕಾರಗೊಂಡಲ್ಲಿ

ಎಲ್ಲೆಲ್ಲಿಯೂ ಸುಖ, ಸೌಖ್ಯ, ಸುಜ್ಞಾನ, ಚೈತನ್ಯಗಳು ಮನೆಮಾಡುತ್ತವೆಂಬ ಜೀವಕೇಂದ್ರಿತ ತತ್ವವನ್ನು ಹಾಗೂ ವಿಶ್ವಮಾನವ ಪ್ರಜ್ಞೆಯನ್ನು ಈ ಮೂಲಕ ಕುವೆಂಪು ಅವರು ತಮ್ಮ ಬಾಲ್ಯದಲ್ಲಿಯೇ ಶೋಧಿಸಿಕೊಳ್ಳುತ್ತಿರುವುದು ವಿಶಿಷ್ಟವಾಗಿದೆ. ಸಾಂಸ್ಕೃತಿಕ ಜವಾಬ್ದಾರಿ ಮಕ್ಕಳಲ್ಲಿ ಮಾನವೀಯ ಮೌಲ್ಯಗಳನ್ನು ಬೆಳೆಸಲು ಮುಖಾಮುಖಿಯಾಗುವುದು ಕುವೆಂಪು ಅವರ ಸಂವೇದನೆಯ ವೈಶಿಷ್ಟವಾಗಿದೆ.

ಕುವೆಂಪು ಅವರ ಆರಂಭದ ಕೃತಿಯೆಂದೋ, ಮಕ್ಕಳ ಕೃತಿಯೆಂದೋ ಅಥವಾ ಇನ್ನಾವ ಕಾರಣಕ್ಕೊ 'ಅಮಲನ ಕಥೆ' ಅಲಕ್ಷಿತ ಕೃತಿಯಾಗಿ ಹೆಚ್ಚು ಚರ್ಚೆಗೊಳ್ಳದಿರುವುದು ವಿಷಾದನೀಯ. ಕವನದ ಉದ್ದಕ್ಕೂ ಬರುವ ಪರಿಸರದ ಅಖಿಲ ಜೀವ ಸಂಕುಲಗಳ ಸಮೃದ್ಧ ವಿವರಗಳು, ಸೂರ್ಯೋದಯ, ಚಂದ್ರೋದಯದ ವಿವರಗಳು, ಕೆಲವು ವಿಮರ್ಶಕರಿಗೆ ಅನಗತ್ಯವೆನಿಸಿರುವುದು ಕನ್ನಡ ವಿಮರ್ಶಾ ವಿವೇಕದ ದುರಂತವೇ ಆಗಿದೆ. ಕನ್ನಡ ವಿಮರ್ಶಾ ವಿವೇಕ ಈ ಕವನವನ್ನು ಸರಿಯಾಗಿ ಗ್ರಹಿಸಲಿಲ್ಲವೆಂದೇ ಹೇಳಬೇಕು. ಇಪ್ಪತ್ತು ವರ್ಷದ ತರುಣನೊಬ್ಬನು ಬರೆದ ಕವನ ಇದು. ಈ ಮಾನದಂಡವನ್ನು ಈ ಕವನ ವಿಮರ್ಶೆಯಲ್ಲಿ ಪರಿಗಣಿಸದೆಯೂ ಅನೇಕ ಕಾರಣಗಳಿಂದ ಮುಖ್ಯವಾಗುತ್ತದೆ.

ಬಾಲ್ಯ ಸಹಜವಾದ, ಆರಂಭ ಕಾಲದ ಅನುಕರಣ ಕೃತಿ ಇದಾದರೂ ಹಲವು ವರ್ಷಗಳ ನಂತರವೂ ತನ್ನ ವಿಶಿಷ್ಟತೆಯಿಂದ ಈ ಕೃತಿ ವಿಶ್ಲೇಷಣೆಯನ್ನು ಬಯಸುತ್ತದೆ. ಆಳವಾದ ಆಲೋಚನೆ ಮತ್ತು ಶ್ರೇಷ್ಠವಾದ ಕಲ್ಪನೆಗಳಿಂದ ಈ ಕೃತಿ ಮಿಂಚುತ್ತದೆ. ಕೆಲವು ವಿಮರ್ಶೆಗಳು ಈ ಎರಡೂಲಕ್ಷಣಗಳು ಕಾವ್ಯಕ್ಕಿಲ್ಲವೆಂದು ಹೇಳುತ್ತಾರೆ. ಇಂಥ ವಿಮರ್ಶೆ ಕೃತಿಯನ್ನು ಪ್ರವೇಶಿಸಿಯೇ ಇಲ್ಲವೆಂಬ ನಂಬಿಕೆ ನನ್ನದು. ಒಂದು ರೀತಿಯಲ್ಲಿ ಸಮೀಕ್ಷಕ ವಿಮರ್ಶೆಯ ನೆಲೆಯಿಂದಲೇ ಹೊರಡುವವರಿಗೆ ಒಂದು ಅಭಿಜಾತ ಕೃತಿಗೆ ಇರಬೇಕಾದ ಲಕ್ಷಣಗಳೇ ದೋಷಗಳಾಗಿ ಕಾಣಿಸುತ್ತವೆ. ಉದಾ : ಈ ಕಾವ್ಯದಲ್ಲಿ ಬರುವ ವಿವರಗಳು, ಪ್ರಾಕೃತಿಕ ವಿಸ್ಮಯಗಳು, ಚಿತ್ರಗಳು ಅನಗತ್ಯವೆಂಬ ನಿಲುವಿಗೆ ಸುಲಭವಾಗಿ ಬಂದುಬಿಡುತ್ತಾರೆ.

ಈ ಕಾವ್ಯವನ್ನು ಶ್ರದ್ಧೆ - ತಾಳ್ಮೆಯಿಂದ ಗಟ್ಟಿಯಾಗಿ ಓದಿಕೊಂಡಾಗ ಆಗುವ ಅನುಭವ ಅದ್ಭುತವಾದುದು. ಹಾಗೆ ಓದುವುದರಿಂದ ಮಕ್ಕಳ ಮೇಲೆ ಮಾತ್ರವಲ್ಲ ದೊಡ್ಡವರ ಮೇಲೂ ತನ್ನ ಗಾಢ ಪರಿಣಾಮವನ್ನು ಬೀರಬಲ್ಲುದು. ವಸ್ತು, ಶೈಲಿ, ಆಶಯ ದೃಷ್ಟಿಯಿಂದಲೂ ಈ ಕೃತಿ ಕನ್ನಡ ಮಕ್ಕಳ ಸಾಹಿತ್ಯಕ್ಕೆ ಉತ್ತಮ ಕೊಡುಗೆ ಎನ್ನಬಹುದು.

> "ಅಮಲನ ಕಥೆಯಲ್ಲಿ ಆಳವಾದ ಆಲೋಚನೆಯಾಗಲಿ, ಉತ್ತಮ ಕಲ್ಪನೆಯಾಗಲಿ ಕಂಡು ಬರುವುದಿಲ್ಲ. ಕಥೆಯಲ್ಲಿ ಬರುವ ಘಟನೆಗಳು ಅಷ್ಟೊಂದು ತಾರ್ಕಿಕವಾಗಿಲ್ಲ. ಅಮಲ ದೇವರನ್ನು ಭಜಿಸುವುದು, ದೇವರು ಪ್ರತ್ಯಕ್ಷವಾಗುವುದು. ಮಧುರ ತನ್ನ ತಂದೆಯನ್ನು ಹುಡುಕಲು ಹೊರಡುವಾಗ ಆಗುವ ಭಯಂಕರ ಮಳೆ, ಆತನಿಗೆ ದೇವರು ಪ್ರತ್ಯಕ್ಷವಾಗುವುದು - ಇವೆಲ್ಲ ಕೇವಲ ಉತ್ಪ್ರೇಕ್ಷೆಗಳು. ಕಥೆಯನ್ನೇ ಮರೆಸಿಬಿಡುವಂತಹ ವರ್ಣನೆಗಳಿವೆ. ಅಮಲನಾಗಲಿ, ಮಧುರನಾಗಲಿ ದೇವರನ್ನು ಭಜಿಸುವ ಪ್ರಸಂಗಗಳು ಇದಕ್ಕೆ ನಿದರ್ಶನ."[೪]

ಇಲ್ಲಿನ ಒಂದು ಸಾಲನ್ನು ಯಥಾವತ್ತಾಗಿ ಬಳಸಿಕೊಳ್ಳುವಂತಿರುವ ಪ್ರಧಾನ್ ಗುರುದತ್ತರು[೫] ಈ ಕಾವ್ಯವನ್ನು ಪ್ರವೇಶಿಸಿಯೇ ಇಲ್ಲ. ಇವರು ಯಾವ ದೋಷಗಳನ್ನು ಮಿತಿಗಳನ್ನು ಗುರುತಿಸಿದ್ದಾರೊ ಅವೆಲ್ಲವೂ ಈ ಕಾವ್ಯದ ಉತ್ತಮ ಲಕ್ಷಣಗಳೆಂಬುದನ್ನು ಮರೆಯುತ್ತಾರೆ.

ಕೃತಿಯ ವರ್ಣನೆಗಳು, ಕಲ್ಪನೆಗಳು, ಅದ್ಭುತ ವಿಸ್ಮಯಗಳು, ವಿವರಗಳು ಮತ್ತು ಪದಗಳ ಲಯ ಬದ್ಧತೆಯಿಂದ ದೊರೆಯುವ ಲಾಭಗಳು ಮಕ್ಕಳ ಸಾಹಿತ್ಯದಲ್ಲಿ ಇರಲೇಬೇಕಾದ ಅಂಶಗಳೆಂಬುದನ್ನು ಮರೆಯುವಂತಿಲ್ಲ. ಹಾಗಾಗಿ "ವಸ್ತು, ಶೈಲಿ ಹಾಗೂ ಪರಿಣಾಮ - ಈ ಮೂರರ ದೃಷ್ಟಿಯಿಂದಲೂ ಅಮಲನಕಥೆ ಮಕ್ಕಳ ಸಾಹಿತ್ಯಕ್ಕೆ ಒಂದು ಒಳ್ಳೆಯ ಕಾಣಿಕೆಯಾಗಿದೆ"[೬] ಎಂದು ರಾಗೌ ಅವರು ಸರಿಯಾಗಿಯೇ ಗುರುತಿಸಿದ್ದಾರೆ.

ಅಂತಿಮವಾಗಿ ಹೇಳುವುದಾದರೆ 'ಅಮಲನ ಕಥೆ' ಮಲೆನಾಡಿನ ಸಕಲ ಜೀವರಾಶಿಗಳ ವಿವರಗಳನ್ನು, ಹಸಿರಿನ ವೈವಿಧ್ಯತೆಯನ್ನು, ಪಶು, ಪಕ್ಷಿ, ಕ್ರಿಮಿ, ಕೀಟ ಹಾಗೂ ನಿಸರ್ಗದ ನಾನಾ ವೈಚಿತ್ರ್ಯಗಳನ್ನು ಮಕ್ಕಳ ಭಾವಕೋಶದಲ್ಲಿ ಜಾಗೃತಗೊಳಿಸುತ್ತದೆ. ಇವು ಅನಾವಶ್ಯಕ ವಿವರ ವಿಚಾರಗಳಾಗಿ ಕಾಣಿಸುವುದಿಲ್ಲ. ಒಂದು ಮಕ್ಕಳಲ್ಲಿ ಜೀವ ಸಮೃದ್ಧಿಯನ್ನು ತುಂಬುವ ಕೆಲಸವಾದರೆ ಮತ್ತೊಂದು ಸೌಂದರ್ಯಪ್ರಜ್ಞೆಯನ್ನು ತುಂಬುವ ಕೆಲಸವಾಗಿದೆ. ಇಡೀ ವಿಶ್ವದ ಸಚರಾಚರಗಳೆಲ್ಲವನ್ನೂ ಒಂದೆಡೆ ಮೇಳೈಸುವಂತೆ ಮಾಡಿ ಮಕ್ಕಳ ವಿಸ್ಮಯ, ಕುತೂಹಲ ಮತ್ತು ಪ್ರಶ್ನೆಗಳಿಗೆ ಒಂದು ಸಮೃದ್ಧವಾದ ಉಣಿಸನ್ನೇ ಇಲ್ಲಿ ಉಣಬಡಿಸಿದ್ದಾರೆ. ಉದಯಾಹಸ್ತಗಳ ನಡುವೆ ನಡೆಯುವ ಸಕಲ ಕ್ರಿಯೆಗಳನ್ನು ಮಕ್ಕಳಲ್ಲಿ ಜಾಗೃತಗೊಳಿಸಿದ್ದಾರೆ. ಮಕ್ಕಳಲ್ಲಿ ಕರುಣೆ, ಭಕ್ತಿ, ಪ್ರಾಣಿದಯೆ, ಮರ, ಗಿಡ, ಪಶು, ಪಕ್ಷಿಗಳ ಬಗೆಗೆ ಪ್ರೀತಿ ಬೆಳೆಸುವಂತಹ ವಿಚಾರ ಇಲ್ಲಿ ಪ್ರಧಾನವಾಗಿದೆ. ಮುಗ್ಧ ಮನಸ್ಸುಗಳು ಬಹುಬೇಗ ಆಕರ್ಷಣೆಗೊಳಪಡುವುದು ಇಂತಹ ವಸ್ತುಗಳಿಗೆ. ಆದ್ದರಿಂದಲೇ ಕಥನದಲ್ಲಿನ ಇಂತಹ ಮೌಲ್ಯಗಳು ಬಾಲ್ಯದಿಂದಲೂ ನಮ್ಮನ್ನು ತಿದ್ದಿ, ತೀಡುತ್ತಾ ಹೊಸ ನೈತಿಕ ಎಚ್ಚರವನ್ನು ಉಂಟು ಮಾಡುತ್ತವೆಂಬುದರಲ್ಲಿ ಎರಡು ಮಾತಿಲ್ಲ.

**ಅಡಿಟಿಪ್ಪಣಿ :**

೧. ಕುವೆಂಪು, ನೆನಪಿನ ದೋಣಿಯಲ್ಲಿ ೧, ಸಹ್ಯಾದ್ರಿ ಪ್ರಕಾಶನ, ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು, ೧೯೮೦, ಪು - ೨೩೮.

೨. ಕುವೆಂಪು, ಅಮಲನಕಥೆ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೮೫, ಪು - ೧೬-೧೭

೩. – ಅದೇ –, ೧೯೮೫, ಪು - ೩೮-೩೯.

೪. ಹೊರೆಯಾಲ ದೊರೆಸ್ವಾಮಿ, ಸಹ್ಯಾದ್ರಿ, ಪ್ರ.ಸಂ. ದೇ. ಜವರೇಗೌಡ, ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು, ೧೯೭೫, ಪು - ೮೨೨

೫. ಪ್ರಧಾನ್ ಗುರುದತ್, ಕುವೆಂಪು, ನವ ಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೧, ಪು - ೫೧

೬. ರಾಗೌ, ಕುವೆಂಪು ಸಾಹಿತ್ಯ ವಿಮರ್ಶನ, ಸಹ್ಯಾದ್ರಿ ಪ್ರಕಾಶನ, ಮೈಸೂರು, ೧೯೭೯, ಪು - ೭೩-೭೪

* * *

# ೫. ನರಿಗಳಿಗೇಕೆ ಕೋಡಿಲ್ಲ : ಪಾಪಿಗು ಉದ್ಧಾರವಿಹುದು

'ಶ್ರೀ ರಾಮಾಯಣ ದರ್ಶನಂ' ಕೃತಿಯಲ್ಲಿ ಪ್ರತಿಪಾದಿತವಾಗಿರುವ "ಪಾಪಿಗು ಉದ್ಧಾರವಿಹುದು" ಎನ್ನುವ ತತ್ವ ಕುವೆಂಪು ಅವರು ೨೦ರ ದಶಕದಲ್ಲಿ ರಚಿಸಿದ 'ನರಿಗಳಿಗೇಕೆ ಕೋಡಿಲ್ಲ' ಎಂಬ ಮಕ್ಕಳ ಕಥೆಯಲ್ಲಿ ಬೀಜರೂಪದಲ್ಲಿ ಪ್ರತಿಪಾದಿತವಾಗಿದೆ. 'ಶೂದ್ರ ತಪಸ್ವಿ' ನಾಟಕದಲ್ಲಿ ಅಂತರ್ಗತವಾಗಿರುವ ಹಿಂಸೆಗೆ ಪ್ರತಿಹಿಂಸೆ ಪರಿಹಾರವಲ್ಲವೆಂಬ ಉದಾತ್ತ ತಾತ್ವಿಕತೆಯ ನೆಲೆಯೂ ಈ ಕಥೆಯಲ್ಲಿ ಗುಪ್ತಗಾಮಿನಿಯಾಗಿದೆ. ಕುವೆಂಪು ಅವರ ಬಾಲ್ಯದಲ್ಲಿ ಪ್ರಭಾವ ಬೀರಿದ ಬುದ್ಧ, ಪರಮಹಂಸ, ವಿವೇಕಾನಂದ, ಗಾಂಧಿ ಹಾಗೂ ಕ್ರಿಸ್ತನ ಅಹಿಂಸಾ ತತ್ವಗಳಾದ ಕರುಣೆ, ಕ್ಷಮಾಗುಣಗಳು ಈ ಕಥೆಯಲ್ಲಿ ಮೇಳೈಸಿವೆ. ಈ ಮೇಲಿನ ಮೌಲ್ಯಗಳು ಮಕ್ಕಳ ಭಾವಕೋಶದಲ್ಲಿ ಮನೆಮಾಡಬೇಕೆಂಬ ತೀವ್ರತೆ ಕುವೆಂಪು ಅವರದು. ಆ ತೀವ್ರತೆಯಿಂದ 'ನರಿಗಳಿಗೇಕೆ ಕೋಡಿಲ್ಲ' ಕೃತಿಯ ಕಥನವನ್ನು ಮಕ್ಕಳ ಮುಂದಿಟ್ಟಿದ್ದಾರೆ. ಮೇಲುನೋಟಕ್ಕೆ ಪಂಚತಂತ್ರದ ಕಥೆಯಂತೆಯೊ, ಜನಪದ ಕಥೆಯಂತೆಯೊ ಕಾಣುವ ಈ ಕೃತಿ ಆಧುನಿಕ ಸಂದರ್ಭದ ಆದರ್ಶ ಮೌಲ್ಯಗಳನ್ನು ತನ್ನಲ್ಲಿರಿಸಿಕೊಂಡು ಅಭಿವ್ಯಕ್ತಗೊಳ್ಳುತ್ತಿರುವುದು ಕುತೂಹಲಕರವಾಗಿದೆ.

ಈ ಕೃತಿಯಲ್ಲಿರುವುದು ಗುಬ್ಬಕ್ಕ, ಗುಬ್ಬಣ್ಣ ಮತ್ತು ತಮ್ಮ ಮೂರು ಮಕ್ಕಳ ಪುಟ್ಟ ಕುಟುಂಬದ ಕಥೆ. ಹಾಗು ಆ ಕುಟುಂಬಕ್ಕೆ ಎದುರಾದ ಸಂಕಷ್ಟ. ಆ ಸಂಕಷ್ಟದಲ್ಲಿ ಗುಬ್ಬಕ್ಕ ತೋರುವ ಔದಾರ್ಯ, ಕರುಣೆ, ಕ್ಷಮಾಗುಣ ಹಾಗೂ ಔಚಿತ್ಯ ಪ್ರಜ್ಞೆ. ಈ ಕುಟುಂಬದಲ್ಲಿ ತಂದೆ ತಾಯಿಗಳು ತಮ್ಮ ಮಕ್ಕಳಲ್ಲಿ ಬೆಳೆಸಬೇಕಾದ ಮೌಲ್ಯಗಳ ಬಗೆಗಿನ ಎಚ್ಚರ ಈ ಕಥೆಗೆ ನಿರಂತರ ಪ್ರಸ್ತುತತೆಯನ್ನು ಪ್ರಾಪ್ತವಾಗಿಸಿದೆ. ಇಂಥ ಮೌಲ್ಯಗಳನ್ನು ಮಕ್ಕಳಲ್ಲಿ ಬೆಳೆಸಲು ಕುವೆಂಪು ಅವರು ಈ ಕಥಾತಂತ್ರವನ್ನು ಆಯ್ದುಕೊಂಡಿದ್ದಾರೆ. ಮಕ್ಕಳ ಭಾವಕೋಶ ವಿಕಾಸಕ್ಕೆ ಅಗತ್ಯವಾದ ಸ್ಥಳೀಯ ಪರಿಸರದ ಚಿತ್ರಗಳು ಇದಕ್ಕೆ ಪೂರಕವಾಗಿ ಬರುತ್ತವೆ.

ಕುವೆಂಪು ಸಾಹಿತ್ಯದಲ್ಲಿ ಮತ್ತೆ ಮತ್ತೆ ಬರುವ ಹಾಗೂ ತಮ್ಮ ಮೇಲೆ ಗಾಢ ಪ್ರಭಾವ ಬೀರಿದ ನವಿಲುಕಲ್ಲಿನ ಚಿತ್ರಗಳು, ಪರಿಸರದ ವರ್ಣನೆಗಳು, ನವಿಲುಕಲ್ಲು ಬೆಟ್ಟಕ್ಕೆ ಹಸುರಂಗಿ ತೊಡಿಸಿದಂತೆ ಕಾಡು ದಟ್ಟವಾಗಿ ಬೆಳೆದು ನಿಂತಿರುವ ವರ್ಣನೆ. ಆ ಬೆಟ್ಟದ ನೆತ್ತಿಯಲ್ಲಿ ನಿಂತು ಸುತ್ತಲೂ ೩೦-೪೦ ಮೈಲಿಗಳ ದೂರ ಕಾಣುವ ಮಲೆನಾಡಿನ ಸುಂದರ ನೋಟದ ವರ್ಣನೆ, ಕಾಡನ್ನು ಹಬ್ಬಿಕೊಂಡಿರುವ ಬೆಟ್ಟದ ಸಾಲುಗಳು, ಅಲೆಅಲೆಯಾಗಿ ಕಾಣಿಸುವ ಪ್ರಕೃತಿ ದೃಶ್ಯಗಳು, ಕಣಿವೆಗಳಲ್ಲಿ ತುಂಬಿರುವ ಹಿಮದ ಕಡಲುಗಳ ಚಿತ್ರ, ಅಲ್ಲಿಂದ ಕಾಣುವ ಗದ್ದೆ, ಅಡಕೆ ತೋಟಗಳ ಐಸಿರಿಯ ವಿವರಗಳು ಕಥೆಯಲ್ಲಿ ಎದುರಾಗುತ್ತವೆ. ಇವು ಮಕ್ಕಳ ಮನಸ್ಸನ್ನು ಮುಂದಿನ ತನ್ನ ಧ್ಯೇಯೋದ್ದೇಶಕ್ಕೆ ಸನ್ನದ್ಧುಗೊಳಿಸುವ ಪೂರ್ವಪೀಠಿಕೆಯಂತೆ ಬರುತ್ತವೆ.

ಇಂಥ ಪರಿಸರದಲ್ಲಿದ್ದ ಹೆಮ್ಮರದ ನೆತ್ತಿಯ ಕೊಂಬೆಯಲ್ಲಿ ಗುಬ್ಬಕ್ಕನ ಸಂಸಾರವಿತ್ತು. ಗಾಳಿ ಬಂದಾಗ ಆ ಕೊಂಬೆ ತೊಟ್ಟಿಲಂತೆ ತೂಗುತ್ತಲೂ ಗಂಡು ಹೆಣ್ಣು ಗುಬ್ಬಿಗಳು ಹಾಡಿ ನಲಿಯುತ್ತಿದ್ದವು. ಅವರ ಮನೆ ಬೆಲ್ಲದ ಗೋಡೆ, ಸಕ್ಕರೆ ಬಾಗಿಲು, ಕಬ್ಬಿನ ಮುಚ್ಚಿಗೆ, ಮನೆಯ ಅಂಗಳದಲ್ಲಿ ಪುಟ್ಟ ಸರೋವರ. ಆ ಸರೋವರದಲ್ಲಿ ನೀರಿಗೆ ಬದಲಾಗಿ ಜೇನುತುಪ್ಪವಿತ್ತಂತೆ. ಈ ಪರಿಯ ಸುಖಗಳಿದ್ದ ಆ ಪಕ್ಷಿ ದಂಪತಿಗಳಿಗೆ ಮಕ್ಕಳಿಲ್ಲದ ಕಾರಣ, ದೇವರ ಹರಕೆ ಹೊತ್ತ ಮೇಲೆ ಮಕ್ಕಳಾದವು. ತಮ್ಮ ಹರಕೆಯನ್ನು ಸಲ್ಲಿಸಲು ಗುಬ್ಬಣ್ಣ ಕಾಶಿಗೆ ಹೋಗಲು ಗುಬ್ಬಕ್ಕಳೊಬ್ಬಳೆ ಮಕ್ಕಳನ್ನು ನೋಡಿಕೊಂಡು ಸಂಸಾರವನ್ನು ಸಾಂಗವಾಗಿ ನಡೆಸಿಕೊಂಡು ಬರುತ್ತಿದ್ದಳು. ಹೀಗಿರಲು ಒಮ್ಮೆ ಮಳೆ – ಗಾಳಿ ಜೋರಾಗಿ ಬಂತು. ಮಳೆಯ ಆಶ್ರಯಕ್ಕಾಗಿ ಹುಲಿಯ್ಯಣ್ಣ, ಕರಡ್ಯಣ್ಣ, ನರಿಯಣ್ಣ ಎಂಬ ಮೂವರು ಪ್ರಯಾಣಿಕರು ಮನೆಗೆ ಬಂದರು. ಗುಬ್ಬಕ್ಕನ ಉಪಕಾರಕ್ಕೆ ಅಪಕಾರವೆಸಗಿದ ನರಿಯಣ್ಣನಿಗೆ ಪ್ರಾಣಭಿಕ್ಷೆಯನ್ನು ಕೊಟ್ಟ ಔದಾರ್ಯ ಈ ಕಥೆಯ ಮುಖ್ಯ ನೆಲೆ. ಈ ಸಣ್ಣ ಕಥೆಯನ್ನು ಹೇಳುವ ನೆಪದಲ್ಲಿಯೇ ಮುಂಗಾರು ಮಳೆಯ ರೌದ್ರತೆಯ ಚಿತ್ರಗಳು ಕಥೆಯ ಜೊತೆಯಲ್ಲಿಯೇ ಮಕ್ಕಳ ಕಲ್ಪನೆಯ ರಾಜ್ಯಕ್ಕೆ ಲಗ್ಗೆ ಹಾಕುವಂತಿವೆ. ಗುಬ್ಬಕ್ಕನ ಮನೆಯಲ್ಲಿ ಆಶ್ರಯ ಪಡೆದ ಮೂವರು ಅತಿಥಿಗಳಲ್ಲೊಬ್ಬರಾದ ಕರಡ್ಯಣ್ಣನು ಬೆಲ್ಲದ ಗೋಡೆಯ ಮೇಲೆ ತಗುಲಿ ಹಾಕಿರುವ ಮಹಾತ್ಮಗಾಂಧಿ, ಶ್ರೀ ರಾಮಕೃಷ್ಣ ಮತ್ತು ವಿವೇಕಾನಂದರ ಪಠಗಳನ್ನು ನೋಡಿ ಕೇಳುವ ಪ್ರಶ್ನೆಯೇ ಈ ಕಥನದ ಕೇಂದ್ರ ಆಶಯ.

> "ಮಕ್ಕಳು ಈ ಮಹಾಪುರುಷರ ಸನ್ನಿಧಿಯಲ್ಲಿಯೇ ಬೆಳೆದರೆ ಅವರೂ ಮಹಾತ್ಮರಾಗುತ್ತಾರೆ. ಭರತ ಮಾತೆಯ ಉದ್ಧಾರ ಮಾಡುತ್ತಾರೆ. ಅದಕ್ಕೋಸ್ಕರ ಈ ಪಠಗಳನ್ನು ಇಟ್ಟಿದ್ದೇನೆ. ಅವರಿಗೆ ದಿನವೂ ಅವರ ಕಥೆಗಳನ್ನು ಜೋಗುಳದಂತೆ ಹೇಳುತ್ತೇನೆ. ಹಾಲು ಬೆಣ್ಣೆಗಳಲ್ಲಿ ಅವರ ಮಹಿಮೆಯನ್ನು ಊಡುತ್ತೇನೆ."[೧]

ಗುಬ್ಬಕ್ಕನ ಈ ಮೇಲಿನ ಮಾತುಗಳು ಮಕ್ಕಳಲ್ಲಿ ಬೆಳೆಸಬೇಕಾದ ಆದರ್ಶ ಗುಣಗಳ ಬಗೆಗೂ, ಅಂಥ ಗುಣಗಳಿಂದ ಭರತ ಮಾತೆಯ ಉದ್ಧಾರಕ್ಕಾಗಿ ಮಕ್ಕಳು ದುಡಿಯಬೇಕಾದ ಜವಾಬ್ದಾರಿಯನ್ನು ವಿವರಿಸುತ್ತದೆ. ಉದಾತ್ತ ಪುರುಷರ ಸತ್ಯ, ಅಹಿಂಸೆ, ಸರ್ವಧರ್ಮ ಸಮನ್ವಯ, ಹೋರಾಟ, ಜ್ಞಾನದಾಹದಂತಹ ಮೌಲ್ಯಗಳನ್ನು ಜೋಗುಳದ ಜೊತೆಯೂ, ಹಾಲು ಬೆಣ್ಣೆಗಳನ್ನು ಉಣಬಡಿಸುವ ಊಟದ ಜೊತೆಯಲ್ಲಿಯೂ ಅವರ ಮಹಿಮೆಯನ್ನು ಶಿಶುತನದಲ್ಲಿಯೇ ಬೆಳೆಸಬೇಕೆಂಬ ಉದಾತ್ತ ಆಶಯವೊಂದನ್ನು ಈ ಕಥೆಯಲ್ಲಿ ಪ್ರತಿಪಾದಿಸಿದ್ದಾರೆ. ಈ ಎಲ್ಲಾ ಚಿಂತನೆಗಳನ್ನು ಒಳಗೊಂಡ ಈ ಕಥೆಯನ್ನು ಮಕ್ಕಳ ಕಥೆಯೆಂದೂ ಅಥವಾ ಅವರು ಬಾಲ್ಯದಲ್ಲಿ ಬರೆದ ಶಿಶು ಬರಹವೆಂದೂ ಉಪೇಕ್ಷಿಸುವಂತಿಲ್ಲ.

ಕಾಗೆ, ಗುಬ್ಬಿ, ನರಿಗಳ ಕಥೆ ಕೇಳುವಾಗಲೂ ಪುರಾಣ ಕಥೆಗಳನ್ನು ಕೇಳುವಾಗಲೂ ಮಕ್ಕಳಲ್ಲಿ ಇರಬೇಕಾದ ಎಚ್ಚರವನ್ನು ಅರಿತುಕೊಳ್ಳಲು ಕುವೆಂಪು ಅವರ ಈ ಕೆಳಗಿನ ಮಾತುಗಳನ್ನು ಉದ್ಧರಿಸುವುದು ಸೂಕ್ತವೆಂದು ಕಾಣುತ್ತದೆ.

> ಮಗುವಿಗೆ ಕತೆ ಕೇಳುವುದೆಂದರೆ ಎಲ್ಲಿಲ್ಲದ ಉತ್ಸಾಹ. ಅನ್ನ ನಿದ್ರೆ ಬಿಟ್ಟು ಬೇಕಾದರೂ ಕತೆ ಕೇಳುತ್ತದೆ. ಕಾಗೆ, ನರಿ, ಕತೆ ಕೇಳುವಾಗ ನಡೆಯುವ ಘಟನಾ ಕ್ರಮದ ಔಚಿತ್ಯದ ಪ್ರಶ್ನೆಯೆ ಇರುವುದಿಲ್ಲ. ಕಾಗೆ ಹಾಡುತ್ತದೆಯೆ? ನರಿ ಮಾತಾಡುತ್ತದೆಯೆ? ಎಂದು ವಿಚಾರಿಸಿ ಸ್ವಾರಸ್ಯ ಕೆಡುವಂತೆ ಮಾಡುವುದಿಲ್ಲ. ಯಾರಾದರೂ ಕಾಗೆ ಹಾಡುತ್ತದೆಯೆ? ನರಿ ಮಾತಾಡುತ್ತದೆಯೆ? ಎಂದು ವಿಚಾರ ಬುದ್ಧಿಯನ್ನು ಎಚ್ಚರಿಸುವಂತೆ ಮಾಡಿ, ಪ್ರಶ್ನೆ ಕೇಳಿಬಿಟ್ಟರೆ ಮಗುವಿನ ತಿಳುವಳಿಕೆ ಲೋಕರಂಗಕ್ಕೆ ಇಳಿದು 'ಕಾಗೆ ಹಾಡುವುದೂ ಇಲ್ಲ, ನರಿ ಮಾತಾಡುವುದೂ ಇಲ್ಲ' ಎಂದು ಅರಿಯುತ್ತದೆ. ಹಾಗಾದರೆ

ಕಥೆಯ ಸ್ವಾರಸ್ಯವೇ ಕೆಡುತ್ತದೆ. ಆದ್ದರಿಂದಲೆ ಸ್ವಾರಸ್ಯ ರಕ್ಷಣೆಗಾಗಿ ಸತ್ಯವನ್ನು ತತ್ಕಾಲದಲ್ಲಿ ಸ್ತಬ್ಧಗೊಳಿಸುತ್ತದೆ. ಕಾವ್ಯದಲ್ಲಿ ಇಚ್ಛಾಪೂರ್ವಕವಾಗಿಯೆ ತಾತ್ಕಾಲಿಕ 'ವಿಚಾರವಿರಾಮ'ವುಂಟಾಗುತ್ತದೆ. ಭಾವಸಂವಾದ ಪ್ರಮುಖವಾಗಿ, ಲೋಕಸಂವಾದ ತತ್ಕಾಲದಲ್ಲಿ ಪ್ರಸುಪ್ತವಾಗುವಂತೆ.[೨]

ಕತೆ ಕೇಳುವ ಕಾಲದಲ್ಲಿ ಸ್ವಾರಸ್ಯ ಆಸ್ವಾದನೆಗೆ ವಶವಾದ ಮಗುವಿನ ಮನಸ್ಸು ತನ್ನ ವಿಚಾರಶಕ್ತಿಗೆ ತತ್ಕಾಲ ವಿರಾಮ ಕೊಡುವುದರಿಂದ ಅದರ ಲೌಕಿಕ ಜೀವನದಲ್ಲಿ ಯಾವ ತೊಂದರೆಗೂ ಒಳಗಾಗುವುದಿಲ್ಲ. ಕಥಾ ಭೂಮಿಕೆಯಿಂದ ಲೋಕಭೂಮಿಗೆ ಇಳಿದ ಮೇಲೂ ಕಥಾಭೂಮಿಕೆಯ ಭಾವನೆಗಳನ್ನೆ ಲೋಕದಲ್ಲಿಯೂ ಸತ್ಯವೆಂದು ಭ್ರಮಿಸಿ ನಡೆದರೆ ಅಪಾಯಕ್ಕೆ ಒಳಗಾಗುತ್ತದೆ. ಕಥಾ ಭೂಮಿಕೆಯ ಗೋವಿನ ತ್ಯಾಗಬುದ್ಧಿಗೂ ಸತ್ಯ ನಿಷ್ಠೆಗೂ ಮೆಚ್ಚಿ ಹುಲಿ ಗೋವನ್ನು ತಿನ್ನದೆ ತಾನೇ ಮೇಲಕ್ಕೆ ಹಾರಿ ಪ್ರಾಣ ಬಿಟ್ಟಿತು ಎಂಬುದನ್ನು ಲೋಕಕ್ಕೂ ಅನ್ವಯಿಸಿ ನಂಬಿ, ಆ ರೀತಿಯ ಪ್ರತಿಕ್ರಿಯೆಯನ್ನೆ ತೋರಲು ಹೋದರೆ, ದುಷ್ಟವ್ಯಾಘ್ರನು ದುಷ್ಟನಾಗಿಯೆ ಇದ್ದು ಬಿಡುವ ದುರಂತವನ್ನು ಅನುಭವಿಸಬೇಕಾಗುತ್ತದೆ. ಆದ್ದರಿಂದ ಲೋಕಜೀವನದಲ್ಲೂ ಕ್ಷೇಮದಿಂದ ಇರಬೇಕಾದಲ್ಲಿ 'ವಿಚಾರಶಕ್ತಿ' ಎಚ್ಚರದಿಂದ ಇರಬೇಕಾಗುತ್ತದೆ.[೩]

ಇಂತಹ ಪ್ರಮಾದ ಕಾವ್ಯ, ಕಥೆ, ಕಾದಂಬರಿಗಳಿಂದ ಉಂಟಾಗುವುದಕ್ಕಿಂತ ಹೆಚ್ಚಾಗಿ ಮತ, ಧರ್ಮ, ಪುರಾಣಾದಿಗಳಿಂದ ಸಂಭವಿಸುತ್ತದೆ. ಏಕೆಂದರೆ ಮಕ್ಕಳು ತಾವು ಕೇಳಿದ ಕಾಗಕ್ಕ ಗುಬ್ಬಕ್ಕನ ಕತೆಗಳನ್ನು ಯಥಾರ್ಥವಾಗಿಯೂ ನಡೆದ ಘಟನೆಗಳು ಎಂದು ನಂಬಬೇಕೆಂದು ನಾವು ಭಾವಿಸುವುದೂ ಇಲ್ಲ. ಬಲತ್ಕರಿಸುವುದೂ ಇಲ್ಲ. ಆದರೆ ಮತ ಪ್ರಪಂಚಕ್ಕೆ ಮತ್ತು ಧಾರ್ಮಿಕ ಸಾಹಿತ್ಯಭೂಮಿಕೆಗೆ ಬಂದೊಡನೆ ಆ ಪ್ರಾಚೀನ ಪುರಾಣಗಳನ್ನು ಶ್ರದ್ಧಾಭಕ್ತಿಗಳಿಂದ ನೈಜ ಘಟನೆಗಳನ್ನೆಂತೋ ಅಂತೆಯೆ ನಂಬಲೇಬೇಕೆಂದು ಬಲಾತ್ಕರಿಸುತ್ತೇವೆ, ಹಾಗೇನಾದರೆ ನಂಬಲೊಲ್ಲದೆ ಹೋದರೆ ಧರ್ಮ ಭ್ರಷ್ಟರೆಂದೂ ಪಾಷಂಡಿಗಳೆಂದೂ ನಾಸ್ತಿಕರೆಂದೂ ನಿಂದನೆಗೆ ಒಳಗಾಗುತ್ತೇವೆ.[೪]

ಮೇಲಿನ ಉದ್ಧರಣೆಯಲ್ಲಿ ಕಾಗಕ್ಕ ಗುಬ್ಬಕ್ಕನ ಕಥೆಗಳನ್ನು ಹಾಗೂ ಪ್ರಾಚೀನ ಪುರಾಣಗಳನ್ನು ಮಕ್ಕಳಿಗೆ ಹೇಳುವಾಗ ವಹಿಸಬೇಕಾದ ಎಚ್ಚರಗಳನ್ನು ಮರೆಯುವಂತಿಲ್ಲ. ಹಾಗೆ ಮರೆತದ್ದೇ ಆದರೆ ಎದುರಾಗುವ ಅನರ್ಥ ಪರಂಪರೆಗಳ ಪರಿಣಾಮ ಮಾರಕವಾದದ್ದೆಂಬ ಅರಿವನ್ನು ಇಲ್ಲಿ ಕಾಣಿಸುತ್ತಾರೆ. ಮಕ್ಕಳ ಸಾಹಿತ್ಯ ರಚನಾಕಾರರು, ಬೋಧಕರು, ತಂದೆ ತಾಯಿಗಳು ಮಕ್ಕಳ ಬೆಳವಣಿಗೆಯ ಸಂದರ್ಭದಲ್ಲಿ ಗಮನಿಸಬೇಕಾದ ಎಚ್ಚರದ ನುಡಿಗಳು ಇವು ಆಗಿವೆ.

**ಅಡಿಟಿಪ್ಪಣಿ :**

೧. ಕುವೆಂಪು, ನರಿಗಳಿಗೇಕೆ ಕೋಡಿಲ್ಲ, ಉದಯರವಿ ಪ್ರಕಾಶನ, ಮೈಸೂರು, ೧೯೯೨, ಪು - ೮

೨. ಶಿವಾರೆಡ್ಡಿ ಕೆ.ಸಿ. (ಸಂ.), ಕುವೆಂಪು ಸಮಗ್ರ ಗದ್ಯ ಸಂಪುಟ - ೨, ಪ್ರಸಾರಾಂಗ, ಕ.ವಿ.ವಿ. ಹಂಪಿ, ೨೦೦೪, ಪು - ೭೪೭

೩. – ಅದೇ –, ಪು - ೭೪೭

೪. – ಅದೇ –, ಪು - ೭೪೭-೭೪೮

* * *

# ೬. ಹಾಳೂರು : ಕೈಗಾರಿಕೀಕರಣ, ನಗರೀಕರಣ ಪ್ರಕ್ರಿಯೆಗಳಿಂದ ಎದುರಾದ ಭಾರತದ ಗ್ರಾಮ ಸಮಾಜದ ಅವನತಿಯ ಕಥನ

ಕುವೆಂಪು ಅವರ 'ಹಾಳೂರು' ಕವಿತೆಯನ್ನು ಕನ್ನಡ ವಿಮರ್ಶೆ ಮಕ್ಕಳ ಕವಿತೆಯೆಂದು ಗ್ರಹಿಸಿದೆ. ಆ ಹಿನ್ನೆಲೆಯಲ್ಲಿಯೇ ಈ ಕೃತಿ ವಿಮರ್ಶೆಯನ್ನು ಮಾಡಿದೆ. ಈ ಕವಿತೆಯನ್ನು ಕೇವಲ ಮಕ್ಕಳಿಗಾಗಿ ಬರೆದ ಕೃತಿಯೆಂದು ತಿಳಿಯುವ ಅಗತ್ಯವಿಲ್ಲವೆನಿಸುತ್ತದೆ. ಏಕೆಂದರೆ ಪ್ರಸ್ತುತ ಸಂದರ್ಭದಲ್ಲಿ ಈ ಕವಿತೆ ಧ್ವನಿಸುವ ಅರ್ಥ ಸಾಧ್ಯತೆಗಳು ದ್ವಿಗುಣಗೊಳ್ಳುವ ಪರಿಯನ್ನು ಗಮನಿಸಿದರೆ ಕುತೂಹಲವೂ, ಆಶ್ಚರ್ಯವೂ ಒಮ್ಮೆಗೆ ಎದುರಾಗುತ್ತದೆ.

ಕೈಗಾರಿಕೀಕರಣದ ಫಲವಾಗಿ ಇಂಗ್ಲೆಂಡಿನ ಗ್ರಾಮೀಣ ಬದುಕು ನವನಾಗರೀಕತೆಯ ರೋಗಕ್ಕೆ ತುತ್ತಾಗಿ ಬಂಜೆಗೊಂಡ ಸಂದರ್ಭದಲ್ಲಿ ಪೋಪ್ ಕವಿ ಬರೆದ 'ದಿ ಡೆಸೆರ್ಟೆಡ್ ವಿಲೇಜ್' ಕೃತಿಯ ಪ್ರಭಾವ ಪ್ರೇರಣೆಗಳಿಂದ ರಚನೆಗೊಂಡ ಹಾಳೂರು ಕವನ ಅಂತಹದೇ ನವನಾಗರೀಕತೆಯ ಮೋಹಜಾಲಕ್ಕೂ, ವಸಾಹತುಶಾಹಿಯ ಅಂಧ ಅನುಕರಣೆಗೂ ಬಲಿಯಾದ ಭಾರತದ ಗ್ರಾಮೀಣ ಬದುಕಿನ ದುರಂತ ಕಥನವನ್ನು ನಮ್ಮ ಮುಂದೆ ಧುತ್ತನೆ ಎದುರಾಗಿಸುತ್ತದೆ.

ಆಧುನಿಕ ಆಸುರೀ ನಾಗರೀಕತೆಯು ಭಾರತದ ಹಳ್ಳಿಗಳನ್ನು ತನ್ನ ಮಾಯಾಜಾಲದ ಆಮಿಷಗಳಿಂದ ಹಾಳು ಮಾಡಿದ ಕಥನವೂ ಇದಾಗಿದೆ. ಈ ಕವನ ಕೌಮಾರ ಸಾಹಿತ್ಯಕ್ಕೆ ಉತ್ತಮ ಉದಾಹರಣೆಯೆನ್ನಬಹುದು. ಕೌಮಾರ್ಯದಿಂದ ಯೌವನಕ್ಕೆ ಕಾಲಿಡುವ ಮಕ್ಕಳಲ್ಲಿ ವೈಚಾರಿಕ ಬೀಜಗಳನ್ನು ಬಿತ್ತುವ, ಆ ಮೂಲಕ ಸ್ಥಳೀಯ ಸಂಸ್ಕೃತಿಗೆ ಎದುರಾಗಿರುವ ಆತಂಕಗಳನ್ನು ತಿಳಿಯಪಡಿಸುವುದನ್ನು ಇಲ್ಲಿ ನೋಡುತ್ತೇವೆ. ಅಂಥ ಆತಂಕಗಳಿಂದ ಮಕ್ಕಳು ಹೊರಬರುವ ಹಾಗೆಯೇ ಅಂಥ ಆತಂಕಗಳಿಗೆ ಮುಖಾಮುಖಿಯಾಗಲು ಮಕ್ಕಳ ಸಂವೇದನೆಯನ್ನು ಸನ್ನದ್ದುಗೊಳಿಸುವ ಪ್ರಕ್ರಿಯೆಯನ್ನು ಕುವೆಂಪು ಅವರು ಇಲ್ಲಿ ಮುಖ್ಯವಾಗಿಸಿಕೊಂಡಿರುವುದನ್ನು ಗಮನಿಸಬಹುದು.

.................. ಪಡುವೆಟ್ಟುಗಳ ನಾಡು ;
ದಟ್ಟವಾದಡವಿಗಳು ಕಿಕ್ಕಿರಿದ ಮಲೆನಾಡು.
ಸುತ್ತಲೂ ಎತ್ತರದ ಬೆಟ್ಟಗಳು, ಕಾಡುಗಳು;
ಎತ್ತ ನೋಡಿದರತ್ತ ಸಿರಿಹಸರು, ಕಣ್ಣುಗಳಿ-
ಗಾನಂದ; ಮೇಣಾತ್ಮಕೊಂದೊಸಗೆ.[೧]

'ಕರಿಸಿದ್ಧ' ಕವನದ ಈ ಮೇಲಿನ ಸಾಲುಗಳು ಭಾರತದ ಗ್ರಾಮ ಸಮಾಜದ ಸಮೃದ್ಧತೆಯ ಸಂಕೇತವಾಗಿ ಕಾಣುತ್ತವೆ. ಇಂಥ ಸಮೃದ್ಧ ಸಂಕೇತದ ಹಳ್ಳಿಗಳು ವಸಾಹತುಶಾಹಿಯ ಆಗಮನದಿಂದ ಹಾಳೂರುಗಳಾಗಿ ಪರಿವರ್ತಿತಗೊಂಡ ವೇದನೆಯ ನಿವೇದನೆ ಈ ಕವನದಲ್ಲಿ ಮಡುಗಟ್ಟಿದೆ.

**ನಮ್ಮೂರೆ, ಹಾಳೂರೆ, ಎಲೆ ಮುದ್ದುಹಳ್ಳಿ,**
**ನಿನ್ನಡಕೆ ತೋಟಗಳು ವನಗಳೀಗೆಲ್ಲಿ?**
**ನಲಿವ ಹೊಲಗದ್ದೆಗಳ ಸೌಂದರ್ಯವೆಲ್ಲಿ?**
**ನಿನ್ನ ಜೀವದ ಸಿರಿಯ ಲಾವಣ್ಯವೆಲ್ಲಿ?**
**ಸುಖದಿ ಜೀವಿಸುತ್ತಿದ್ದ ನಿನ್ನ ಜನರೆಲ್ಲಿ?**
**ಹಾಳಾಗಿ ಹೋದೆಯಾ, ಹಾ ಮುದ್ದುಹಳ್ಳಿ!**
**ನಿನ್ನ ಗುಡಿ ಗೂಬೆಗಳಿಗಾಯಿತಾವಾಸ;**
**ನಿನ್ನನಿರದಾವರಿಸಿತು ಮಹಾ ವಿನಾಶ!**[೨]

ನಿರೂಪಕನ ಈ ಮೇಲಿನ ಉದ್ಧರಣೆ ಹಳ್ಳಿಯ ಚೈತನ್ಯ ವಸಾಹತುಶಾಹಿಯ ಮಹಾವಿನಾಶಕ್ಕೆ ತುತ್ತಾದ ಚಿತ್ರಣವನ್ನು ಕಟ್ಟಿಕೊಡುತ್ತದೆ. ವಸಾಹತುಶಾಹಿಯ ಬೆನ್ನ ಹಿಂದೆಯೇ ಬಂದ ನಗರೀಕರಣ ಪ್ರಕೃತಿ ತಾಯಿಯ ನಿಜವಾದ ಮಕ್ಕಳ ಚೈತನ್ಯವನ್ನೇ ತನ್ನ ಕಬಂಧಬಾಹುಗಳಿಗೆ ಬಲಿಯಾಗಿಸಿಕೊಂಡು ಹಳ್ಳಿಗಳನ್ನು ನಿರ್ಜೀವವಾಗಿಸಿದ ಚಿತ್ರವನ್ನು ಕವನದುದ್ದಕ್ಕೂ ಕಾಣಿಸುತ್ತದೆ. ಹೀಗೆ ಧುತ್ತನೆ ಎದುರಾದ ನವಶೋಕದಿಂಚರ ಇಡೀ ಭಾರತವೆಂಬ ಹಳ್ಳಿಯ ಶೋಕವಾಗಿ ಧ್ವನಿತವಾಗುತ್ತದೆ. ಪಟ್ಟಣದ ಮಾರಿಯ ಆಮಿಷದ ಫಲವಾಗಿ ಅತಿಭೋಗ ರೋಗಕ್ಕೆ ಸಿಲುಕಿದ ಹಾಳೂರ ಗತ ಕಥನವನ್ನು ಪುರದ ಗೆಳೆಯನಿಗೆ ನಿವೇದಿಸುವ ಈ ತಂತ್ರ ಮಕ್ಕಳಲ್ಲಿ ಹೊಸ ಎಚ್ಚರವನ್ನು ಹುಟ್ಟಿಸುವ ಹುನ್ನಾರು ಇಲ್ಲಿ ಗುಪ್ತಗಾಮಿನಿಯಾಗಿದೆ.

**...... ಇಂಗ್ಲೆಂಡಿನ ಸದ್ಯದ ಪರಿಸ್ಥಿತಿ ದಯನೀಯವಾಗಿದೆ. ದೇವರ ದಯೆಯಿಂದ ಹಿಂದುಸ್ಥಾನಕ್ಕೆ ಅಂಥಾ ಸ್ಥಿತಿ ಎಂದೂ ಬಾರದಿರಲಿ.**[೩]

'ಹಿಂದ್ ಸ್ವರಾಜ್' ಕೃತಿಯಲ್ಲಿರುವ ಗಾಂಧಿಯ ಈ ಬಯಕೆಯನ್ನು ಪುರದ ಗೆಳೆಯನಿಗೆ ನಿರೂಪಕರು ವಿವರಿಸುತ್ತಾರೆ. ಗಾಂಧಿಯ ಈ ಮಾತು ಕವನದುದ್ದಕ್ಕೂ ಎಲ್ಲಾ ನೆಲೆಗಳಲ್ಲಿಯೂ ಅನುರಣಿಸುತ್ತದೆ. ದೇಶಕನ್ನವ ನೀಡುವ ರೈತರಿಗೆ ಬೀಡಾಗಿದ್ದ ಹಳ್ಳಿ ಪುರದ ಮಾರಿಗೆ ಉಣಿಸಾದ ಅನರ್ಥ ಪರಂಪರೆಯ ಚಿತ್ರಗಳನ್ನು ಮಕ್ಕಳಿಗೆ ಚಲನಚಿತ್ರದ ದೃಶ್ಯಾವಳಿಯಂತೆ ಮುಂದಿಡುತ್ತಾರೆ. ಆ ಮುಖೇನ ನಗರಾಕರ್ಷಣೆಯ ಅನರ್ಥಗಳನ್ನೂ, ಹಳ್ಳಿಗಳಿಗೆ ಹಿಂತಿರುಗಬೇಕೆಂಬ ಕಿವಿಮಾತನ್ನೂ ಹಾಡುತ್ತಾರೆ.

..... ದೊಡ್ಡ ದೊಡ್ಡ ಪಟ್ಟಣಗಳು ಬರೀ ಜಂಜಾಟ, ವ್ಯರ್ಥ ಮಾಯಾಜಾಲ; ಅದರಲ್ಲಿನ ಜನಕ್ಕೆ ಸುಖವಿಲ್ಲ ಎಂದು ಅವರು ತೀರ್ಮಾನಿಸಿದರು. ಆ ಮಾಯಾಬಜಾರುಗಳಲ್ಲಿ ದುರಾಚಾರ, ದುರ್ನೀತಿ, ಸೂಳೆಗಾರಿಕೆ, ಜೂಜು ಹೆಚ್ಚಾಗಿ ಬೆಳೆದು ಕಳ್ಳಕಾಕರಿಗೆ ದರೋಡೆಗಾರರ ತಂಡಗಳಿಗೆ ಅವು ನೆಲೆವೀಡಾಗುತ್ತವೆ. ಬಡವರನ್ನು ಭಾಗ್ಯವಂತರು ಸುಳಿಯುತ್ತಾರೆ ಎಂಬುದನ್ನೂ

ಅರಿತುಕೊಂಡಿದ್ದರು. ಆದರಿಂದ ಚಿಕ್ಕ ಚಿಕ್ಕ ಹಳ್ಳಿಗಳೇ ಅವರಿಗೆ ತೃಪ್ತಿದಾಯಕವಾಗಿದ್ದವು. ರಾಜರು, ರಾಜದಂಡ, ಅವರ ಖಡ್ಗ ಎಲ್ಲವೂ ನೈತಿಕ ಬಲಕ್ಕೆ ಸಮನಲ್ಲ ಎಂಬುದು ಅವರಿಗೆ ತಿಳಿದಿತ್ತು.[೪]

ಈ ಮೇಲಿನ ಉದ್ಧರಣೆ ನಗರದ ವಿರಾಟ್‌ದರ್ಶನ ಮಾಡಿಸುತ್ತದೆ. ಪಟ್ಟಣಗಳ ಬೆಳವಣಿಗೆ ದುರ್ನೀತಿಯ ದುರಾಚಾರದ ಸಂಕೇತವಾದರೆ ಚಿಕ್ಕ ಚಿಕ್ಕ ಹಳ್ಳಿಗಳು ನೆಮ್ಮದಿಯ ನೈತಿಕ ಬಲದ ಕ್ರಿಯಾಶೀಲತೆಯ ಸಂಕೇತಗಳಾಗಿ ಕಾಣಿಸುತ್ತವೆ.

ನಗರೀಕರಣದ ಫಲವಾಗಿ ಸ್ಥಳೀಯ ನ್ಯಾಯಪದ್ಧತಿ ಹಿಂಸರಿದು ಇಂಗ್ಲಿಷರ ಕೋರ್ಟುಗಳ ಪ್ರವೇಶದಿಂದ ನಿರ್ಮಾಣವಾದ ಚಿತ್ರವನ್ನು ಇಲ್ಲಿ ಕಾಣುತ್ತೇವೆ. ಬ್ರಿಟಿಷರ ವಸಾಹತುಶಾಹಿಯ ನ್ಯಾಯ ಪದ್ಧತಿ ಜಿಗಣೆಯಂತೆ ಬಡವರ ರಕ್ತವನ್ನು ಹೀರಿ ಕೊಬ್ಬುವಂತಹದ್ದು. ವಸಾಹತುಶಾಹಿಯ ಆಗಮನದಿಂದ ಹಳ್ಳಿಗಳಿಗೆ ಪ್ರವೇಶಿಸಿದ

..... ಈ ವೃತ್ತಿ ದುರ್ನೀತಿಯನ್ನು ಕಲಿಸುತ್ತದೆ. ಇದರಲ್ಲಿ ಪ್ರಲೋಭನ ಹೆಚ್ಚು. ಅದಕ್ಕೆ ಬಲಿಯಾಗದವರು ಬಹಳ ಕಡಿಮೆ.

ಒಂದು ಕಡೆ ಹಿಂದೂಗಳೂ ಮುಸಲ್ಮಾನರೂ ಜಗಳವಾಡಿದರು. ಸಾಧಾರಣ ಮನುಷ್ಯ ಆದುದನ್ನೆಲ್ಲ ಮರೆತು ಬಿಡಿ ಎನ್ನುತ್ತಾನೆ. ಎರಡೂ ಕಡೆ ಅಲ್ಪಸ್ವಲ್ಪ ತಪ್ಪಿದ್ದೇ ಇರುತ್ತದೆ. ಮುಂದೆ ಜಗಳವಾಡಬೇಡಿ ಎಂದು ಬುದ್ಧಿ ಹೇಳುತ್ತಾನೆ. ಆದರೆ ಅವರು ವಕೀಲರ ಬಳಿಗೆ ಹೋಗುತ್ತಾರೆ. ಅವರು ಮಾಡುವುದೇನು? ತಮ್ಮ ಕಕ್ಷಿಗಾರನ ಪರವಾಗಿ ವಾದ. ಆ ಕಕ್ಷಿಗಾರನಿಗೇ ಗೊತ್ತಿಲ್ಲದ ಸಂಗತಿಗಳನ್ನೂ ಹುಡುಕಿ ತೆಗೆಯುವುದು. ಹಾಗೆ ಮಾಡದಿದ್ದರೆ ಅಂಥವರು ತಮ್ಮ ವೃತ್ತಿಗೆ ಕಳಂಕ ಆದುದರಿಂದ ಸಾಧಾರಣವಾಗಿ ವಕೀಲರು ಜಗಳವನ್ನು ನಂದಿಸುವುದಿಲ್ಲ, ಮತ್ತಷ್ಟು ಉರಿಸುತ್ತಾರೆ.

..... ಪರರ ದುಃಖ ನಿವಾರಣೆಗಾಗಿ ಯಾರೂ ವಕೀಲಿ ಮಾಡುವುದಿಲ್ಲ; ಹಣ ಗಳಿಸಲು ಮಾಡುತ್ತಾರೆ. ಐಶ್ವರ್ಯ ಸಂಪಾದನೆಗೆ ಇದೊಂದು ದಾರಿಯಾಗಿದೆ. ಜಗಳ ಹೆಚ್ಚಾದರೆ ವಕೀಲರಿಗೆ ಸಂತೋಷ; ನಾನಿದನ್ನು ಸ್ವಂತವಾಗಿ ಬಲ್ಲೆ, ಚಿಕ್ಕ ಪುಟ್ಟ ವಕೀಲರು ಇಲ್ಲದ ಕಡೆ ಜಗಳ ಹುಟ್ಟಿಸುತ್ತಾರೆ. ಅವರ ದಲ್ಲಾಳಿಗಳು (ಪೂಟ್ ಲಾಯರ್) ಜಿಗಣೆಯಂತೆ ಬಡವರ ರಕ್ತವನ್ನು ಹೀರುತ್ತಾರೆ. ಆ ಕಸಬೇ ಜಗಳ ಕಚ್ಚಾಟಗಳಿಗೆ ಪ್ರೋತ್ಸಾಹ ಕೊಡುವಂಥದು. ವಕೀಲರಿಗೆ ಕೆಲಸ ಹೆಚ್ಚು ಇರುವುದಿಲ್ಲ. ಭೋಗ ವಿಲಾಸಗಳನ್ನು ಬಯಸುವ ಮೈಗಳ್ಳ ಜನ ಇಂಥ ವೃತ್ತಿಗಳನ್ನು ಹುಡುಕುತ್ತಾರೆ.[೫]

ಇಂಥ ಎಲ್ಲಾ ಬಗೆಯ ಶೋಷಣೆಗಳಿಗೆ ಗುರಿಯಾದ ಹಳ್ಳಿಯನ್ನು ಕಾಪಾಡಿ ಉದ್ಧರಿಸೆಂದು ಲಕ್ಷ್ಮೀಲೋಲನಲ್ಲಿ ನಿವೇದಕ ಮೊರೆಯಿಡುತ್ತಾನೆ. ಗಾಂಧೀಜಿ ವಿಚಾರಧಾರೆಯ ಬೀಜರೂಪದಂತಿರುವ ಹಿಂದ್ ಸ್ವರಾಜ್‌ನ ಈ ಕೆಳಗಿನ ಉದ್ಧರಣೆ ವಸಾಹತು ಸಂಸ್ಕೃತಿಯ ಆಗಮನ ಪೂರ್ವದ ಭಾರತೀಯ ಸಂಸ್ಕೃತಿಯ ವಾಸ್ತವ ಚಿತ್ರವನ್ನು ನಮ್ಮ ಮುಂದೆ ಇಡುತ್ತದೆ.

...... ಈ ರಾಷ್ಟ್ರದಲ್ಲಿಯೂ ವೈದ್ಯರು, ವಕೀಲರು, ಕೋರ್ಟು ಕಚೇರಿ ಎಲ್ಲವೂ ಇತ್ತು. ಎಲ್ಲಕ್ಕೂ ಒಂದು ಮಿತಿಯಿತ್ತು. ಈ ವೃತ್ತಿ ಯಾವುದೂ ಉಳಿದುದಕ್ಕಿಂತ ಶ್ರೇಷ್ಠ ಎಂದು ಯಾರೂ ತಿಳಿದಿರಲಿಲ್ಲ. ಅಲ್ಲದೆ ಆ ವಕೀಲರು, ವೈದ್ಯರು ಜನರನ್ನು ಕೊಳ್ಳೆ ಹೊಡೆಯುತ್ತಿರಲಿಲ್ಲ. ಜನತೆಯ

ಆಶ್ರಿತರು ಅವರು, ಆಶ್ರಯದಾತರಲ್ಲ ಎಂದು ಎಲ್ಲರೂ ತಿಳಿದಿದ್ದರು. ನ್ಯಾಯ ತೃಪ್ತಿಕರವಾಗಿತ್ತು. ಸಾಧಾರಣವಾಗಿ ಯಾರೂ ನ್ಯಾಯಾಲಯಕ್ಕೆ ಹೋಗುತ್ತಿರಲಿಲ್ಲ. ಕೋರ್ಟುಗಳಿಗೆ ಜನರನ್ನು ಸೆಳೆಯಲು ದಳ್ಳಾಳಿಗಳು ಯಾರೂ ಇರಲಿಲ್ಲ. ಅಂಥದೇನಾದರೂ ಇದ್ದರೆ, ರಾಜಧಾನಿಗಳಲ್ಲಿ ಮಾತ್ರ. ಸಾಮಾನ್ಯ ಜನತೆ ತಮ್ಮ ಬೇಸಾಯ ಮಾಡುತ್ತ ಸ್ವತಂತ್ರವಾಗಿದ್ದರು. ಅವರದು ನಿಜವಾಗಿಯೂ ಸ್ವರಾಜ್ಯ.

ಈಗಲೂ ಈ ದುಷ್ಟ ಆಧುನಿಕ ನಾಗರಿಕತೆ ಎಲ್ಲಿ ವ್ಯಾಪಿಸಿಲ್ಲವೋ ಅಲ್ಲಿ ಹಿಂದುಸ್ಥಾನ ಮೊದಲಿನಂತೆಯೇ ಇದೆ.[೬]

ಈ ಎಲ್ಲಾ ಲಕ್ಷಣಗಳ ಸ್ವರಾಜ್ಯವಾಗಿದ್ದ ಭಾರತದ ಗ್ರಾಮೀಣ ಪರಿಸರ ಅನೇಕ ಬಗೆಯ ಶೋಷಣೆಗಳಿಗೆ ಗುರಿಯಾದುದನ್ನು ಮುಂದಿನ ಕವನ ನಿರೂಪಕನ ಮಾತುಗಳಲ್ಲಿ ಕಾಣಿಸುತ್ತದೆ.

ಸ್ಥಳೀಯ ಸಾಹಿತ್ಯ, ಭಾಷೆಗಳು ಹಿಂದೆ ಸರಿದು ಪರಭಾಷೆಯ ಮೇಲಾಟ ಮೋಹಕ್ಕೆ ಬಲಿಯಾದುದನ್ನು ಕಾಣುತ್ತೇವೆ.

ನಾವೀಗ ಮಾತೃಭಾಷೆಯ ತಳ್ಳಿದೂರ
ಪರಭಾಷೆಯನ್ನಪ್ಪಿ ಚುಂಬಿಪೆವು ಪೂರ
ನಮ್ಮ ನಾಡಿನ ನುಡಿಯು ನಮಗೆ ಸೊಗಸಲ್ಲ,
ಪರಭಾಷೆಯೆಂದರದು ನಮಗೆಲ್ಲ ಬೆಲ್ಲ.
ನಮ್ಮ ಪಡೆದಿಹ ತಾಯ ತಳ್ಳಿಹೆವು ದೂರ;
ಪರಕೀಯಳೊಬ್ಬಳಿಗೆ ಹಾಕಿದೆವು ಹಾರ!
ಕರ್ಣಾಟಮಾತೆಯಾ ಮಕ್ಕಳಿರ ಕೂಡಿ
ತಾಯ್ನುಡಿಯ ಸೇವೆಯನು ಮನಸಿಟ್ಟು ಮಾಡಿ :[೭]

ಈ ಉದ್ಧರಣೆಯಲ್ಲಿ - ಇದು ನಮ್ಮ ತಾಯ್ನುಡಿಯು! ಇದು ನಮ್ಮ ಭಾಷೆ! ಇರದೆ ನಿಮಗೆಲ್ಲ ಇದನೆತ್ತುವಭಿಲಾಷೆ? ಇಂಥ ವಿಚಾರಧಾರೆಯನ್ನು ತಾಯ್ನುಡಿಯ ಬಗೆಗಿನ ಅಭಿಮಾನವನ್ನು ಮಕ್ಕಳಲ್ಲಿ ಬೆಳೆಸಬೇಕೆಂಬುದು ಈ ಕೃತಿಯ ಬಹುಮುಖ್ಯ ಆಶಯವಾಗಿದೆ.

ವಸಾಹತುಶಾಹಿಯ ಆಗಮನದಿಂದ ಪ್ರವೇಶಿತವಾದ ಕಾರ್ಖಾನೆಗಳಲ್ಲಿನ ಕೂಲಿಗಾಗಿ ಪಟ್ಟಣಮುಖಿಯಾಗಿ ನೆಲೆಸಿದ ಹಳ್ಳಿಗರ ದಾರುಣ ಸ್ಥಿತಿಯನ್ನು, ದುರವಸ್ಥೆಯನ್ನು ನಿರೂಪಕರು ಮಕ್ಕಳ ಮುಂದಿಡುತ್ತಾರೆ. ಕುವೆಂಪು ಅವರ ಈ ಕೆಳಗಿನ ಮಾತುಗಳು ಇಂಥ ಉದ್ದೇಶದಿಂದಲೇ ಈ ಕವನ ರಚಿತಗೊಂಡದ್ದರ ಸಂದರ್ಭವನ್ನು ಕಾಣಿಸುತ್ತವೆ. ಹಾಗಾಗಿ ಆ ಮಾತುಗಳನ್ನು ಇಲ್ಲಿ ಉಲ್ಲೇಖಿಸುವುದು ಸೂಕ್ತವೆನಿಸುತ್ತದೆ.

..... ರುಗ್ಣಶಯ್ಯೆಯ ಮೇಲೆ ಕುಳಿತೇ ರಚಿಸಿದ್ದ ದೀರ್ಘ ಕವನವೆಂದರೆ 'ಹಾಳೂರು'. ಅದು ಪೋಪ್ ಕವಿಯ 'ಡೆಸರ್ಟೆಡ್ ವಿಲೇಜ್'ನ ಭಾಷಾಂತರವೂ ಅಲ್ಲ, ಸರಳಾನುವಾದವೂ ಅಲ್ಲ. ಆಗ ನನ್ನ ಬಳಿ ಆ ಪುಸ್ತಕವೂ ಇರಲಿಲ್ಲ. ಅದನ್ನು ಹಿಂದೆ ಓದಿದರ ಪ್ರಭಾವವೆಷ್ಟೊ ಅಷ್ಟೆ. ಸಂಪೂರ್ಣವಾಗಿ

ನಮ್ಮ ಹಳ್ಳಿಯ ಜೀವನ ಮತ್ತು ಹಳ್ಳಿಗಳಿಂದ ಪೇಟೆಗೆ ಬಂದು ನೆಲೆಸುತ್ತಿದ್ದ ಹಳ್ಳಿಗರ ದಾರುಣವಾದ ಬದುಕು ಇವುಗಳನ್ನು ಕುರಿತದ್ದು.[೮]

ಪಟ್ಟಣದ ಆಮಿಷಗಳಾದ ಕುಡಿತ, ಜೂಜು, ಸಿನಿಮಾ, ನಾಟಕ, ಅತಿಭೋಗಗಳ ಆಕರ್ಷಣೆ, ಅಂಥ ಆಕರ್ಷಣೆಯಿಂದ ಗ್ರಾಮೀಣ ಜನ ದುಃಖದ ವ್ಯೂಹಕ್ಕೆ ಉಣಿಸಾಗಿ ಇತ್ತ ಹಳ್ಳಿಯ ಸುಖವೂ ಇಲ್ಲದೆ ಅತ್ತ ಪುರದ ಸುಖವೂ ಇಲ್ಲದೆ ನರಳುವ ಸ್ಥಿತಿ ಇಲ್ಲಿ ಪ್ರಕಟವಾಗುತ್ತದೆ. ನಗರಾಕರ್ಷಣೆಯಿಂದ ಎದುರಾಗುವ ದುಃಖ ದುಮ್ಮಾನಗಳಿಗೆ ಹಳ್ಳಿಯ ಬದುಕಿನ ವಿಶಿಷ್ಟತೆಗಳನ್ನು ಮುಖಾಮುಖಿಯಾಗಿಸುತ್ತಾರೆ.

**ಹಳ್ಳಿಯರಿಗಿರುವ ಸುಖ ಪಟ್ಟಣಿಗರಿಗೆಲ್ಲಿ?**
**ಹಳ್ಳಿಯವ ತಾ ರಾಜ ತನ್ನೂರಿನಲ್ಲಿ!**
**ಗಂಜಿಯುಂಡರು ಹಳ್ಳಿಯದು ಪರಮನಾಕ,**
**ಪಾಯಸವನುಂಡರೂ ಪುರ ನರಕಲೋಕ!**
**ಹಳ್ಳಿಯೊಳು ಬಲುಶಾಂತಿ, ಗಲಿಬಿಲಿಯೆ ಇಲ್ಲ;**
**ಪಟ್ಟಣವೊ ಬರಿಬೊಬ್ಬೆ, ಶಾಂತಿಯೇ ಇಲ್ಲ!**
**ಪುರಜನದ ದಾಸತನ ಹಳ್ಳಿಯವಗಿಲ್ಲ.**
**ತನ್ನ ಕೆಲಸವ ಮಾಡಿ ತಾ ದುಡಿವನೆಲ್ಲ.**
**ಹಳ್ಳಿಯವ ಬಾಯ್ಬಿಡನು ಪರರನ್ನಕಾಗಿ;**
**ಹಳ್ಳಿಯವ ತಿರುಗನೈ ಸೋಮಾರಿಯಾಗಿ;**
**ಹಳ್ಳಿಯವನೆಂದಿಗೂ ಗರ್ವಿತಾನಲ್ಲ,**
**ಕಡತಂದ ಬಟ್ಟೆಯಾ ಷೋಕಿ ಅವಗಿಲ್ಲ.**
**ಹಳ್ಳಿಗನೆ, ಪುರದವನ ಅನುಸರಿಸಬೇಡ;**
**ಹಳ್ಳಿಯೇ ಸ್ವರ್ಗವೈ, ಅದ ಬಿಡಲು ಬೇಡ**
**ಹಳ್ಳಿಯೊಳಗಿಹವು ಸುಖ ಶಾಂತಿ ವಿಶ್ರಾಂತಿ,**
**ಹಳ್ಳಿಯೊಳಗಿಲ್ಲ ಪುರದಾ ಹೆಮ್ಮೆ ಭ್ರಾಂತಿ.**
**ಕೋಟಿ ಧನವಿದ್ದರೂ ಪಟ್ಟಣವೂ ಗೋಳು;**
**ಕಾಸಿಲ್ಲದಿದ್ದರೂ ಸರಿಯೆ, ಇರಲಿ ಸ್ವಾತಂತ್ರ್ಯ;**
**ಸುಖವಿದ್ದರೂ ಹೀನವೈ ಪಾರತಂತ್ರ್ಯ;**
**ಸ್ವಾತಂತ್ರ್ಯವಿಲ್ಲದವಗಾನಂದವೆಲ್ಲಿ?**
**ಸ್ವಾತಂತ್ರ್ಯಕಾವಾಸವಾಗಿಹುದು ಹಳ್ಳಿ!**[೯]

ಹೊಸ ಶಿಕ್ಷಣ ಪದ್ಧತಿಯಿಂದ ನಗರಾಕರ್ಷಿತರಾಗಿ ಊರ ಜಾಣರು ಪುರದ ಪಾಲಾದ್ದರಿಂದ ಸರ್ಕಾರಿ ನೌಕರಿಯ ರೋಗ ಹತ್ತಿದ್ದರಿಂದ ಹಳ್ಳಿಯ ಉದ್ಧಾರವಾದರು ಯಾರಿಂದ ಎಂಬ ಪ್ರಶ್ನೆಯನ್ನು ಮಕ್ಕಳ ಮುಂದಿಡುತ್ತಾರೆ.

ನಮ್ಮ ದೇಶದ ಜೀವವೀ ನಮ್ಮ ಹಳ್ಳಿ
ಅಮ್ಮ ಭಾರತಿಗಿದೇ ಸಂಜೀವಬಳ್ಳಿ
ಹಳ್ಳಿ ಹಾಳಾಗುವುದ ಕಂಡು ಕಣ್ಣಾರ,
ಯುವಕನೇ, ಓಡುವೆಯ ಸೇರೆ ಮೈಸೂರ?
ಭಾರತಿಯುದರ ಹಳ್ಳಿ ಹಸಿದಿಹುದ ನೋಡಿ
ಓಡುವವನಲ್ಲವೇ ಬಲು ನೀಚ ಹೇಡಿ?
ಭಾರತಾಂಬೆಗೆ ಹಳ್ಳಿಯೇ ಹೃದಯ, ಹೊಟ್ಟೆ,
ಯಂತ್ರಗಳು ಬಂದರೂ ಬೇಸಾಯ ಬಟ್ಟೆ.
ಹೊಟ್ಟೆಗಿಲ್ಲದೆ ಕೂಗುತಿಹುದೆಮ್ಮ ದೇಶ;
ಬೆದರಿಸುವುದೆಮ್ಮ ನಾಗರಿಕತೆಯ ರೋಷ;
ಚೀರುತಿದೆ ಮಾರಿಯಂದದಿ ಯಂತ್ರಘೋಷ;
ಪಾಪ ಧರಿಸಿಹುದೀಗ ಪುಣ್ಯದಾ ವೇಷ!
ಹಳ್ಳಿಗಳೆ ಅಮ್ಮ ಭಾರತಿದೇವಿಗನ್ನ :
ಹಳ್ಳಿಯುದ್ಧಾರದೊಳು ತೊಡಗುವನೆ ಧನ್ಯ!''

ಈ ಕವಿತೆಯ ಈ ಮೇಲಿನ ಉದ್ಧರಣೆ ಹಿಂದ್ ಸ್ವರಾಜ್‌ನ ಈ ಕೆಳಗಿನ ಮಾತುಗಳನ್ನು ನೆನಪಿಸುತ್ತದೆ.

> ..... ಈ ಯಂತ್ರ - ಕಾರಖಾನೆಗಳಿಂದಲೇ ಹಿಂದೂಸ್ತಾನ ಬಡತನದಲ್ಲಿ ಮುಳುಗಿದೆ. ಮ್ಯಾಂಚೆಸ್ಟರ್ ನಮಗೆ ಮಾಡಿರುವ ಹಾನಿಗೆ ಮಿತಿಯೇ ಇಲ್ಲ. ಮ್ಯಾಂಚೆಸ್ಟರ್‌ನಿಂದಲೇ ಹಿಂದುಸ್ತಾನದ ಕೈಗಾರಿಕೆಯೆಲ್ಲ ನಾಶವಾಗಿದೆ. ..... ಈ ಯಂತ್ರಗಳ ಭ್ರಾಂತಿ ಹೆಚ್ಚಿದರೆ ನಮ್ಮ ದೇಶ ಬಹಳ ದುಃಖಕ್ಕೆ ಗುರಿಯಾಗುತ್ತದೆ.
>
> ...... ಕಾಮಿನಿ ಕಾಂಚನದ ವಿಷ ಮೈಮನ ಆತ್ಮ ಎಲ್ಲಕ್ಕೂ ಮೃತ್ಯು. ಆದುದರಿಂದ ಗಿರಣಿ ಕಾರಖಾನೆಗಳು ಹೆಚ್ಚಿದರೆ ನಮಗೆ ಹರ್ಷವಾಗಬೇಕಾಗಿಲ್ಲ.''

ವಸಾಹತುಶಾಹಿಯ ವ್ಯಾಪಾರೀ ಧೋರಣೆಯಿಂದ ಸ್ಥಳೀಯ ಆರ್ಥಿಕ ವ್ಯವಹಾರಗಳು ಲೋಭಕ್ಕೆ ಗುರಿಯಾಗಿ, ದಿಕ್ಕೆಟ್ಟ ಸ್ಥಿತಿಯನ್ನು ಹಾಳೂರಿನ ವ್ಯಾಪಾರಿ ಸಿದ್ಧಣ್ಣನ ಕಥನ ನಿರೂಪಿಸುತ್ತದೆ. ಇದು ವಸಾಹತುಶಾಹಿಯ ಪರಿಣಾಮದ ಫಲ. ದಾಕ್ಷಿಣ್ಯ, ಚಾರಿತ್ರ, ಕರುಣೆ, ನಯ, ದಯೆ, ಸಜ್ಜನತೆ, ತುಸುಧರ್ಮ, ದೇವರೊಳು ಭಯ - ಇಂತಿದ್ದ ಸಿದ್ದಣ್ಣನಿಗೆ ಪಟ್ಟಣದ ವರ್ತಕರ ಲೋಭದ ಆಸೆ ಬೆಂಬತ್ತಿತು. ಸಿದ್ದಣ್ಣನನ್ನು ಉದಾಹರಣೆಯಾಗಿಟ್ಟುಕೊಂಡು ಕುವೆಂಪು ಅವರು ಮಕ್ಕಳಿಗೆ ಹೊಸ ನೈತಿಕತೆಯನ್ನು ಬೋಧಿಸುತ್ತಿದ್ದಾರೆ. ರಸ್ಕಿನ್ ಹೇಳುವಂತೆ :

> ನೀತಿ ಅನೀತಿಯ ಸಾರಾಸಾರ ವಿಚಾರ ಮಾಡದೆಯೆ ಹಣ ಗಳಿಸುವ ನಿಯಮಗಳನ್ನು ಮಾಡುವುದು ಮನುಷ್ಯನ ಸೊಕ್ಕನ್ನು ತೋರಿಸುತ್ತದೆ. ಅದಷ್ಟು ಅಗ್ಗವಾಗಿಕೊಂಡು ಬಂದಷ್ಟೂ ಹೆಚ್ಚಿನ ಧಾರಣೆಗೆ ಮಾರುವ ನಿಯಮದಂಥ ನಾಚಿಕೆಗೆಟ್ಟ ಮಾತು ಮತ್ತೊಂದಿಲ್ಲ.
>
> ..... ಧರ್ಮ ಬಿಟ್ಟು ಗಳಿಸಿದ ಹಣದಿಂದ ಲಾಭವಿಲ್ಲ; ಸತ್ಯವಾದರೊ ಸಾವಿನಿಂದ ಕಾಪಾಡುತ್ತದೆ.

..... ಹಣಗಳಿಸಲು ಯಾರು ಬಡವರಿಗೆ ಸಂಕಟ ಕೊಡುತ್ತಾನೋ ಅವನು ಬಾಗಿಲು ಅಲೆದು ತಿರುಪೆ ಎತ್ತಿಯಾನು.

..... ವ್ಯಾಪಾರದಲ್ಲಿ ಬಡವನನ್ನು ಕಾಡದಿರು. ಹಾಗೆ ಕಾಡಿದವರನ್ನು ದೇವರೇ ಕಾಡುತ್ತಾನೆ.

..... ಹಣದ ವ್ಯವಹಾರ ಮನಸ್ಸಿಗೆ ಬಂದಂತೆ ದಾರಿದ್ರ್ಯ ದೌರ್ಜನ್ಯಗಳು ಹೆಚ್ಚುತ್ತವೆ. ಹಣ ವಿಷಯವಾಗುತ್ತದೆ. ಅದೇ ಹಣದ ಹೊಳೆಯ ಜಾಡನ್ನು ನಿರ್ಧರಿಸಿ ನಿಯಮಪೂರ್ವಕವಾಗಿ ಅದನ್ನು ಹರಿಯಿಸಿದರೆ ಕಾಲುವೆ ಕಟ್ಟಿದ ಹೊಳೆಯಂತೆ ಸುಖದಾಯಕವಾಗುತ್ತದೆ.

..... ಹೀಗಾಗಿ ವ್ಯವಹಾರ ಕೆಟ್ಟು ಜನರಲ್ಲಿ ಗುಲ್ಲಾಗಿ ಬಡತನ ಬೆಳೆದು ವರ್ತಕರು ವಂಚಕರಾಗುತ್ತಾರೆ. ಗಿರಾಕಿಗಳು ಸುಳ್ಳರಾಗುತ್ತಾರೆ. ಒಂದು ಅನ್ಯಾಯದಿಂದ ಹಲವು ಅನ್ಯಾಯಗಳು ಹುಟ್ಟುತ್ತವೆ. ಕಡೆಯಲ್ಲಿ ಸಾಹುಕಾರ, ವರ್ತಕ, ಗಿರಾಕಿ, ಎಲ್ಲರೂ ನಷ್ಟಪಡುತ್ತಾರೆ. ಸಂಕಟಕ್ಕೆ ಗುರಿಯಾಗುತ್ತಾರೆ. ಇಂಥ ರಾಷ್ಟ್ರ ದುಃಖಿಯಾಗುತ್ತದೆ. ಅದರ ಸಂಪತ್ತೆಲ್ಲ ವಿಷವಾಗಿ ಪರಿಣಮಿಸುತ್ತದೆ.

..... ಏನೇ ಬಂದರೂ ನೀತಿ ಬಿಡದಿರುವುದು ಹೇಗೆ ಎಂಬ ಶಾಸ್ತ್ರವನ್ನು ಕಲಿಸುವ ದೇಶ ಸುಖವಾಗಿರುತ್ತದೆ. ಉಳಿದುದೆಲ್ಲವೂ ವೃಥಾ ಪ್ರಯಾಸ. ವಿನಾಶಾ ಕಾಲೇ ವಿಪರೀತ ಬುದ್ಧಿ : ಹೇಗಾದರೂ ಮಾಡಿ ಹಣಗಳಿಸಿಕೊಳ್ಳುವ ವಿದ್ಯೆ ಕಲಿಸುವುದು ವಿಪರೀತ ಬುದ್ಧಿಯನ್ನು ಹೇಳಿಕೊಟ್ಟಂತೆ.[೧೨]

ಇಂಥ ಎಲ್ಲ ಲಕ್ಷಣಗಳನ್ನು ಮೈವೆತ್ತ ವಸಾಹತುಶಾಹಿಯ ವಾಣಿಜ್ಯೀಕೃತ ಧೋರಣೆಯ ಅಂಕುಶಕ್ಕೆ ಸಿಕ್ಕಿ ಸಿದ್ಧಣ್ಣನ ಬದುಕು ದುರಂತವಾಯಿತು. ಇದು ವಸಾಹತುಕಾಲದಿಂದ ಪ್ರಸ್ತುತ ಜಾಗತೀಕರಣದವರೆಗೂ ಹೊಸ ಚಿಂತನೆಯನ್ನೇ ಪ್ರಕಟಿಸುತ್ತದೆ.

ಮೂಲಭೂತ ಸೌಲಭ್ಯಗಳನ್ನೂ ಪೂರೈಸಲಾರದ ಪ್ರಭುತ್ವದ ಬಗೆಗಿನ ಕಟು ವಿಮರ್ಶೆ, ಅಂಥ ಪ್ರಭುತ್ವಗಳು ರಚಿಸುವ ಕಾನೂನು ಯೋಜನೆಗಳ ನಗರ ಪಕ್ಷಪಾತಿ ಧೋರಣೆಗಳ ಬಗೆಗೆ ವಿಡಂಬನೆಯನ್ನು ಕಾಣುತ್ತೇವೆ.

**..... ಹಳ್ಳಿಗಳ ಲೆಕ್ಕಿಸದ ಸರಕಾರ**
**ತನ್ನಾತ್ಮಹತ್ಯಕ್ಕೆ ತಾನೆ ಆಧಾರ.**[೧೩]

ಆಧುನಿಕ ಬೃಹತ್ ಕೈಗಾರಿಕೆಗಳ ಆಗಮನದ ಫಲವಾಗಿ ಸ್ಥಳೀಯ ಕುಶಲ ಕೈಗಾರಿಕೆಗಳು ನೆಲಕಚ್ಚಿದ ಕಥನವು ಈ ಕವನದ ಒಂದು ಮುಖ್ಯಭಾಗವಾಗಿದೆ. ಅಕ್ಕಸಾಲಿಗ, ಕಮ್ಮಾರ, ಕುಂಬಾರ, ಕುಶಲ ಕಲೆಗಳು ವಸಾಹತುಶಾಹಿಯ ಕಬಂಧಬಾಹುಗಳಿಗೆ ಸಿಕ್ಕಿ ನಿರ್ನಾಮವಾದ ಕಥನವು ಮಕ್ಕಳಲ್ಲಿ ಹೊಸ ಎಚ್ಚರವನ್ನು ಮೂಡಿಸುವಂತಿದೆ.

ಈ ಬಗೆಯ ಅಸಂಖ್ಯ ದುಗುಡಗಳ ನಡುವೆ ಸಾಮಾಜಿಕ ಅನಿಷ್ಟವಾದ ಜಾತಿಯ ವೈಷಮ್ಯ, ದಾಸ್ಯದ ಫಲವಾಗಿ ಎದುರಾದ ಜನಾಂಗ ನೀತಿಗಳು, ಮೇಲು - ಕೀಳುಗಳು, ಮತ ಮತ್ತು ಧರ್ಮಗಳ ಫಲವಾಗಿ ನಿರ್ಮಾಣವಾದ ಸಾಮಾಜಿಕ ಬದುಕು ಕೊಳೆತು ನಾರುವ ವಿಷಮ ಚಿತ್ರಣವು ಹಳ್ಳಿಯ ಐಕ್ಯತೆಗೆ ಭಂಗಕಾರಿಯಾಗಿದೆ. ಇಂಥ ಸಂಗತಿಗಳನ್ನು ಮಕ್ಕಳ ಮುಂದೆ ಚಿತ್ರಗೊಳಿಸಿ ಹೊಸ ಎಚ್ಚರವನ್ನು ಮೂಡಿಸುತ್ತಿದ್ದಾರೆ.

ಇಂಥ ಅಸಂಖ್ಯ ನವಶೋಕಗಳ ಇಂಚರವನ್ನು, ಅದಕ್ಕೆ ಕಾರಣವಾದ ಸಂಗತಿಗಳನ್ನು, ಅದರಿಂದ ಉಂಟಾದ ಪರಿಣಾಮ, ಪ್ರಭಾವ, ದುರಂತಗಳನ್ನು ಚಿತ್ರವಾಗಿಸಿ ಪ್ರಶ್ನೆಗಳಾಗಿಸಿ ಹೊಸ ವಿಚಾರಧಾರೆಯೊಂದನ್ನು ಮಕ್ಕಳ ಮುಖ್ಯ ಜೀವನ ಮೌಲ್ಯವಾಗಿಸುವ ಜವಾಬ್ದಾರಿಯ ವಿಚಾರ ಈ ಕೃತಿಯಲ್ಲಿ ಬೀಜ ರೂಪ ತಾಳಿದೆ.

ಅತಿಭೋಗವದು ರೋಗ, ಕೊಲ್ಲುವುದು ಬೇಗ;
ಪುರಗಳಿಂದೈತಂದಿಹುದು ಹಳ್ಳಿಗೀಗ.
ಸಾಮಾನ್ಯ ಜೀವನವು ಪರಮ ಸುಧೆಯಂತೆ,
ಮಿತಿಮೀರಿದತಿ ಭೋಗ ಘೋರ ವಿಷದಂತೆ.
ದೇಶಗಳು ಹಾಳಾದುದತಿಭೋಗದಿಂದ,
ನೀತಿ ನಾಶವು ಕೀರ್ತಿನಾಶವದರಿಂದ
ಬೇಸಾಯದಾಧಾರದಿಂದಿರುವ ದೇಶ
ಎಂದಿಗೂ ಸುಖಕರವು, ಅದಕಿಲ್ಲ ನಾಶ!
ಹಳ್ಳಿಯಿಲ್ಲದ ದೇಶವದು ನಿತ್ಯ ರೋಗಿ,
ಕೊಳೆಯುವುದು ನಿರ್ಜೀವ ಶವದಂತೆಯಾಗಿ.
ಹಳ್ಳಿಗಳಿರುವ ದೇಶವದು ಸದಾ ಭೋಗಿ,
ಅದೆ ಎಂದಿಗಾನಂದದಿಂದಿರುವ ಯೋಗಿ!
ಅಮ್ಮ ಭಾರತಿ, ಹಳ್ಳಿ ಹಾಳಾಗದಿರಲಿ!
ನಿನಗೆಂದು ಸುಖಶಾಂತಿಯಾನಂದವಿರಲಿ!
ಹಳ್ಳಿಗಳ ಮಾತಾಯಿ, ಭಾರತಿಯೆ, ಅಮ್ಮಾ,
ಹಳ್ಳಿಗಳು ಹಾಳಾಗದಂತೆ ಸಲಹಮ್ಮಾ![೧೪]

ಪ್ರಸ್ತುತ ಜಾಗತೀಕರಣದ ಸಂದರ್ಭದಲ್ಲಿ ಈ ಕವನ ಮತ್ತೂ ಪ್ರಸ್ತುತಗೊಳ್ಳುತ್ತದೆ. ಐಟಿ-ಬಿಟಿಗಳ ಮೇಲಾಟ, ರೈತರ ಆತ್ಮಹತ್ಯೆಯ ದುರಂತಗಳು, ಸಾರ್ವಜನಿಕ ಬೃಹತ್ ಕೈಗಾರಿಕೆಗಳ ದಿವಾಳಿ, ಸ್ಥಳೀಯ ಕೃಷಿಗೆ ಎದುರಾಗಿರುವ ಆತಂಕ, ವಾಣಿಜ್ಯೀಕೃತ ಆಮಿಷಗಳಿಂದ ಲೋಭದ ಬೆನ್ನು ಹತ್ತಿದ ಸಾಮಾಜಿಕ ಬದುಕಿನ ದುರಂತ, ರಾಜಕೀಯ ಭ್ರಷ್ಟತೆಯ ಮೇಲಾಟ, ಜಾಗತಿಕ ಮಟ್ಟದ ಭಯೋತ್ಪಾದನೆಯ ಭಯ, ಮಹಾಯುದ್ಧಗಳ ಭೀತಿಯ ನೆರಳಲ್ಲಿ ಭಾರತ ಎಂಬ ದೇಶ ಮಾತ್ರವೇ ಅಲ್ಲ ಇಡೀ ಜಾಗತಿಕ ಹಳ್ಳಿಯೇ ದುರಂತದ ಹಾದಿ ಹಿಡಿದಿರುವುದನ್ನು ಈ ಕವನ ಮಾರ್ಮಿಕವಾಗಿ ಕಾಣಿಸುತ್ತದೆ. ಇಡೀ ಜಗತ್ತೇ ನಿತ್ಯರೋಗಿಯಾಗಿ, ಜಗತ್ತೇ ಹಾಳೂರಾಗಿ ನಿತ್ಯ ನವಕಥನವಾಗುತ್ತದೆ.

**ಅಡಿಟಿಪ್ಪಣಿ :**

೧. ಕುವೆಂಪು, ಕಥನಕವನಗಳು, ಕಾವ್ಯಾಲಯ ಪ್ರಕಾಶಕರು, ಮೈಸೂರು, ೧೯೪೯, ಪು - ೧
೨. ಶಿವಾರೆಡ್ಡಿ ಕೆ.ಸಿ. (ಸಂ.), ಕುವೆಂಪು ಸಮಗ್ರ ಕಾವ್ಯ ಸಂಪುಟ ೨, ಪ್ರಸಾರಾಂಗ, ಕ.ವಿ.ವಿ. ಹಂಪಿ, ೨೦೦೦, ಪು - ೭೪೮
೩. ಸಿದ್ಧವನಹಳ್ಳಿ ಕೃಷ್ಣಶರ್ಮ (ಅನು), ಮಹಾತ್ಮಗಾಂಧಿಯವರ ಆಯ್ದ ಕೃತಿಗಳು, ಸಂಪುಟ - ೩, ಮೂಲಭೂತ ಕೃತಿಗಳು, ನವಜೀವನ ಪ್ರಕಾಶನ ಮಂದಿರ, ಅಹಮದಾಬಾದು, ೨೦೦೧, ಪು - ೧೬

೪. – ಅದೇ –, ಪು - ೧೦೧ - ೧೦೨

೫. – ಅದೇ –, ಪು - ೯೬-೯೭

೬. – ಅದೇ –, ಪು - ೧೦೨

೭. ಶಿವಾರೆಡ್ಡಿ ಕೆ.ಸಿ. (ಸಂ.), ಕುವೆಂಪು ಸಮಗ್ರ ಕಾವ್ಯ ಸಂಪುಟ ೨, ಪ್ರಸಾರಾಂಗ, ಕ.ವಿ.ವಿ. ಹಂಪಿ, ೨೦೦೦, ಪು - ೭೩೫

೮. ಕುವೆಂಪು, ನೆನಪಿನ ದೋಣಿಯಲ್ಲಿ ೧, ಸಹ್ಯಾದ್ರಿ ಪ್ರಕಾಶನ, ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ೧೯೮೦, ಪು - ೬೯೮

೯. ಶಿವಾರೆಡ್ಡಿ ಕೆ.ಸಿ. (ಸಂ.), ಕುವೆಂಪು ಸಮಗ್ರ ಕಾವ್ಯ ಸಂಪುಟ ೨, ಪ್ರಸಾರಾಂಗ, ಕ.ವಿ.ವಿ. ಹಂಪಿ, ೨೦೦೦, ಪು - ೭೩೬-೭೩೭

೧೦. – ಅದೇ –, ಪು - ೧೪೦

೧೧. ಸಿದ್ಧವನಹಳ್ಳಿ ಕೃಷ್ಣಶರ್ಮ (ಅನು), ಮಹಾತ್ಮಗಾಂಧಿಯವರ ಆಯ್ದ ಕೃತಿಗಳು, ಸಂಪುಟ - ೩, ಮೂಲಭೂತ ಕೃತಿಗಳು, ನವಜೀವನ ಪ್ರಕಾಶನ ಮಂದಿರ, ಅಹಮದಾಬಾದು, ೨೦೦೧, ಪು - ೧೨೬-೧೨೭

೧೨. – ಅದೇ –, ಪು - ೪೨-೪೭.

೧೩. ಶಿವಾರೆಡ್ಡಿ ಕೆ.ಸಿ. (ಸಂ.), ಕುವೆಂಪು ಸಮಗ್ರ ಕಾವ್ಯ ಸಂಪುಟ ೨, ಪ್ರಸಾರಾಂಗ, ಕ.ವಿ.ವಿ. ಹಂಪಿ, ೨೦೦೦, ಪು - ೭೪೫

೧೪. – ಅದೇ –, ಪು - ೭೫೦

* * *

# ೭. ಬೊಮ್ಮನಹಳ್ಳಿಯ ಕಿಂದರಿಜೋಗಿ : ಪ್ರಭುತ್ವದ ಭ್ರಷ್ಟತೆ ಹಾಗೂ ಅಧಃಪತನದ ವಿಶ್ಲೇಷಣೆ

ಊರಗೌಡನ ಬೇಜವಾಬ್ದಾರಿತನದಿಂದಾಗಿ ತುಂಗಾತೀರದ ಬಲಗಡೆಯಲ್ಲಿರುವ ಬೊಮ್ಮನಹಳ್ಳಿಯಲ್ಲಿ ನೆಮ್ಮದಿಯೇ ಹದಗೆಟ್ಟಿದೆ. ಗೌಡ ಪ್ರತಿ ವರ್ಷ ತೆರಿಗೆಯನ್ನು ಒಡೆದು ಬೈಯ್ದು ಸಂಗ್ರಹಿಸಿದರೂ ಸಮಾಜದ ಯೋಗಕ್ಷೇಮದ ಕಡೆಗೆ ಕಾಳಜಿಯಿಲ್ಲ. ಈತನಿಂದ ಇಡೀ ಬೊಮ್ಮನಹಳ್ಳಿಯ ಬದುಕೇ ಕದಡಿನಿಂತಿದೆ. ಕವಿತೆಯ ಆರಂಭದಲ್ಲಿಯೇ ಎದುರಾಗುವ ಇಲಿಗಳ ಕಾಟ ಮತ್ತು ಅದರಿಂದ ಜನಗಳ ಬದುಕಿಗೊದಗಿರುವ ಗೋಲಾಟ ಈ ವಿಚಾರವನ್ನು ಸಮರ್ಥಿಸುತ್ತದೆ. ಈ ಕಥನದಲ್ಲಿ ಬರುವ ಇಲಿಗಳ ಕಾಟ ಸಾಂಕೇತಿಕ ಅರ್ಥದಲ್ಲಿ ವಿವಿಧಾರ್ಥಗಳನ್ನು ಧ್ವನಿಸುತ್ತದೆ. ಬೊಮ್ಮನಹಳ್ಳಿಯ ಪ್ರತಿಯೊಬ್ಬರ ಖಾಸಗಿ ಮತ್ತು ಸಾಮಾಜಿಕ ಬದುಕಿನ ನೆಮ್ಮದಿಯೇ ದಿಕ್ಕೆಟ್ಟ ಸ್ಥಿತಿಯನ್ನು ಕವಿತೆಯ ಮೊದಲ ಎರಡು ಭಾಗಗಳಲ್ಲಿ ವರ್ಣಿಸಲಾಗಿದೆ. ನೆಮ್ಮದಿಯ ಬದುಕಿಗಾಗಿ ಜನತೆ ಮಾಡಿದ ಎಲ್ಲಾ ಪ್ರಯತ್ನಗಳು ನಿಷ್ಫಲವಾಗಿ ಸಮಸ್ಯೆಗಳ ಗೊಂದಲಪುರದಂತಿದೆ ಬೊಮ್ಮನಹಳ್ಳಿಯ ಬದುಕು. ಈ ಎಲ್ಲಾ ಸಮಸ್ಯೆಗಳಿಗೆ ಪರಿಹಾರವನ್ನು ನೀಡಲಾರದ ಗೌಡನ ವ್ಯವಸ್ಥೆಯ ಬಗ್ಗೆ ಜನರು ತೋರುತ್ತಿರುವ ಪ್ರತಿರೋಧವು ಕವಿತೆಯ ಮೂರನೇ ಭಾಗದಲ್ಲಿ ಕಾಣಿಸುತ್ತದೆ. ಹೀಗೆ ಒದಗಿದ ಸಮಸ್ಯೆಗೆ ಪರಿಹಾರವನ್ನು ಹಿಡಿಯಲು ನಡೆಸುವ ಸಭೆ, ಚರ್ಚೆ, ಸಲಹೆಗಳು ನಮ್ಮ ಸಾಮಾಜಿಕ ವ್ಯವಸ್ಥೆಯನ್ನೇ ವಿಡಂಬಿಸುತ್ತವೆ.

ಸಮಸ್ಯೆಯ ಪರಿಹಾರಕ್ಕಾಗಿ ಗೌಡನು ಆಮಿಷವಾಗಿ ಒಡ್ಡುವ ಆರು ಸಾವಿರ ನಾಣ್ಯಗಳನ್ನು ಪಡೆಯುವ ಸಲುವಾಗಿ ಊರಿನ ಜನರು ಕೊಡುವ ಸಲಹೆಗಳು ಆ ಸಮಾಜದ ನಿಷ್ಕ್ರಿಯತೆ, ಸ್ವಾರ್ಥತೆಯ ಪ್ರತೀಕದಂತೆ ಕಾಣುತ್ತವೆ. ಹೀಗಿರುವಾಗ ಅತಿಮಾನುಷವಾಗಿ ಪ್ರವೇಶ ಪಡೆಯುವ ಜೋಗಿ ಗೌಡನ ಜೊತೆಗಿನ ಒಪ್ಪಂದದೊಂದಿಗೆ ಊರಿಗೊದಗಿದ ಸಂಕಷ್ಟವನ್ನು ಪರಿಹಾರ ಮಾಡುತ್ತಾನೆ. ತನ್ನ ಅತಿಮಾನುಷ ಶಕ್ತಿಯಿಂದ ನಾಡಿಗೊದಗಿದ ಸಂಕಷ್ಟವನ್ನು ಪರಿಹರಿಸಿದ ಜೋಗಿಗೆ ಗೌಡನು ಕೊಟ್ಟ ಮಾತಿನಂತೆ ನಡೆಯದಿರುವುದು ಬೊಮ್ಮನಹಳ್ಳಿಯ ಪ್ರಭುತ್ವದ ನೈತಿಕ ಅಧಃಪತನವನ್ನು ಸೂಚಿಸುತ್ತದೆ. ಈ ಅಧಃಪತನ ಪ್ರಭುತ್ವದ ಎಲ್ಲಾ ಮಟ್ಟಗಳಲ್ಲೂ ಕಾಣುವ ಭ್ರಷ್ಟತೆಯನ್ನು ಪ್ರತಿನಿಧಿಸುವ ಸಾಂಕೇತಿಕ ಕ್ರಿಯೆಯಾಗಿ ಇಲ್ಲಿ ಮೈಪಡೆಯುತ್ತದೆ. ಅದಕ್ಕೆ ತಕ್ಕ ಪ್ರತಿಫಲವಾಗಿ ಊರಿನ ಜನತೆ ತಮ್ಮ ಮಕ್ಕಳಿಂದ ದೂರವಾಗುವ ಸನ್ನಿವೇಶಕ್ಕೆ ಗುರಿಯಾಗುತ್ತಾರೆ. ಜೋಗಿಯ ಕಿಂದರಿ ನಾದ, ಆ ನಾದಕ್ಕೆ ಮನಸೋತು ಹಿಂಬಾಲಿಸುವ ಮಕ್ಕಳು, ಆಗ ಅವರು ಮುಟ್ಟುವ ಲೋಕವು ಬೊಮ್ಮನಹಳ್ಳಿಗಿಂತ ಭಿನ್ನವಾದ ಮಕ್ಕಳ ಕನಸಿನ ರಾಜ್ಯ. ಅದು ದೇವರ ರಾಜ್ಯ. "ಮಕ್ಕಳು ದೇವರ ರಾಜ್ಯದ ಪ್ರಜೆಗಳು" ಕಿಂದರಿಜೋಗಿಯು ಮಕ್ಕಳನ್ನು ಕರೆದೊಯ್ದ ರಾಜ್ಯ ಸಮಾಜದ ಆದರ್ಶರಾಜ್ಯದಂತಿದೆ.

ವಾಸ್ತವ ಬದುಕಿನಲ್ಲಿ ಮಕ್ಕಳು ಯಾವುದನ್ನು ಪಡೆಯಲು ಸಾಧ್ಯವಿಲ್ಲವೊ ಆ ಎಲ್ಲವು ಕಿಂದರಿಜೋಗಿಯ ಲೋಕದಲ್ಲಿ ದತ್ತವಾಗುತ್ತದೆ.

ಕಿಂದರಿಜೋಗಿ ಮತ್ತು ಮಕ್ಕಳನ್ನು ಹಿಂಬಾಲಿಸಲಾರದ ಕುಂಟನು ಅಳುತ್ತ ಹೇಳುವ ಈ ಕೆಳಗಿನ ಮಾತುಗಳೇ ಆ ಕನಸಿನ ರಾಜ್ಯದ ಚಿತ್ರವನ್ನು ಕಾಣಿಸುತ್ತದೆ.

ಅಯ್ಯೋ ಎನಗಿಲ್ಲವರಾನಂದ!
ಜೋಗಿಯು ಕಿಂದರಿ ಬಾರಿಸೆ ಕಂಡೆವು
ಬಣ್ಣದ ಮನೆಗಳ ಪಟ್ಟಣವ,
ಹಣ್ಣುಗಳುದುರಿದ ತೋಟಗಳ!
ನಾನಾ ಆಟದ ಸಾಮಾನುಗಳ,
ತರತರರಾಗದ ಗೊಂಬೆಗಳ;
ಮಾತಿಗೆ ಮೀರಿದ ಆನಂದಗಳ,
ಕೈಗೇ ಸಿಕ್ಕುವ ಹಕ್ಕಿಗಳ!
ಜಿಂಕೆಗಳೆಮ್ಮೊಡನಾಡಿದುವಲ್ಲಿ,
ಮೊಲಗಳು ಕುಳಿತುವು ಮೈಮೇಲಲ್ಲಿ!
ಅಯ್ಯೋ ಹೋಯಿತೆ ಆ ನಾಕ!
ಅಯ್ಯೋ ಬಂದಿತೆ ಈ ಲೋಕ![೧]

ಬೊಮ್ಮನಹಳ್ಳಿಯಲ್ಲಿ ಯಾವುದು ಅಸಾಧ್ಯವೋ ಅದೆಲ್ಲವೂ ಕಿಂದರಿಜೋಗಿಯ ಲೋಕದಲ್ಲಿ ದತ್ತವಾಗುತ್ತದೆ. ಕುಂಟ ಹುಡುಗನ ಉದ್ಗಾರದಲ್ಲಿ ಇದನ್ನೆ ಕಾಣುತ್ತೇವೆ. ಕೊಟ್ಟ ಮಾತಿಗೆ ತಪ್ಪಿ ನಡೆದರೆ ಪರಮಾತ್ಮನು ಮೆಚ್ಚಲಾರನೆಂಬ ಭಾರತೀಯ ಸಂಸ್ಕೃತಿಯ ಸಂದೇಶವನ್ನು ಮಕ್ಕಳ ಬೆಳವಣಿಗೆಗೆ ಅಗತ್ಯವಾಗಿರುವ ಜೀವನ ಮೌಲ್ಯವಾಗಿ ಕುವೆಂಪು ಅವರು ಈ ಕಥನದಲ್ಲಿ ಅಭಿವ್ಯಕ್ತಿಸಿದ್ದಾರೆ. ಅಂತೆಯೇ ಮಕ್ಕಳಲ್ಲಿ ಬಾಲ್ಯದಲ್ಲಿಯೇ ಬೆಳೆಯಬೇಕಾದ ಕಲ್ಪನೆ, ಕುತೂಹಲ, ವಿಸ್ಮಯ ಹಾಸ್ಯಪ್ರಜ್ಞೆಗೆ ಈ ಕವಿತೆ ಉತ್ತಮ ಉದಾಹರಣೆ. ಕನ್ನಡ ಮಕ್ಕಳ ಸಾಹಿತ್ಯದಲ್ಲಿ ಕಿಂದರಿಜೋಗಿ ಕವನ ಅನೇಕ ಕಾರಣಗಳಿಂದ ಮಹತ್ವದ ಕೃತಿ. ಈ ಕೃತಿಯಲ್ಲಿನ ಭಾಷೆ, ಲಯಗಾರಿಕೆ, ಪ್ರಾಸ, ಹಾಸ್ಯ, ಅತಿಮಾನುಷ ಶಕ್ತಿಯ ಪ್ರವೇಶ, ಕಥನದ ನಡಿಗೆ ಇವೆಲ್ಲವೂ ಅತ್ಯಂತ ಶಕ್ತಿಪೂರ್ಣವಾಗಿ ಅಭಿವ್ಯಕ್ತಿಗೆ ಒಳಪಟ್ಟಿವೆ. 'ಶ್ರೀಮಾನ್ ಪುಟ್ಟಪ್ಪನವರ ಕವನಗಳನ್ನು ಓದಿ ಆನಂದ ಪಡದ ಕನ್ನಡಿಗನಿರಲಾರನು. ಅವರ 'ಕಿಂದರಿಜೋಗಿ'ಯನ್ನು ಹಾಡದ ಚಿಕ್ಕ ಮಕ್ಕಳಿಲ್ಲ'[೨] ಎಂಬ ಬಿ.ಎಂ.ಶ್ರೀ ಅವರ ಮಾತು ಇಂಥ ಕವನವನ್ನು ಓದಿದ ಪ್ರತಿಯೊಬ್ಬರಿಗೂ ಉತ್ಪ್ರೇಕ್ಷೆಯ ಮಾತಾಗಿ ಕಾಣಲಾರದು.

'ಕಿಂದರಿಜೋಗಿ'ಯ ಓದು ತುಂಬಾ ಪ್ರಭಾವ ಪರಿಣಾಮಕಾರಿಯಾದುದು. ಇದು ಮಕ್ಕಳನ್ನು ಮಾತ್ರವಲ್ಲ, ಎಲ್ಲ ವಯೋಮಾನದವರನ್ನು ಕಿನ್ನರ ಲೋಕಕ್ಕೆ ಕೊಂಡೊಯ್ಯುವ ಶಕ್ತಿಯನ್ನು ಪಡೆದಿದೆ. ಸ್ವತಃ ಕುವೆಂಪು ಅವರೆ ತಮ್ಮ ವಾಚನದ ಸಂದರ್ಭದಲ್ಲಿ ಆದ ಅನುಭವವನ್ನು ದಾಖಲಿಸಿದ್ದಾರೆ. ಅದನ್ನು ಇಲ್ಲಿ ಉಲ್ಲೇಖಿಸುವುದು ಸೂಕ್ತವೆಂದು ಕಾಣುತ್ತದೆ.

"ಒಂದು ಸ್ಮರಣೀಯವಾದ ವಿಷಯವನ್ನು ಅದರ ಸ್ವಾರಸ್ಯಕ್ಕಾಗಿ ಇಲ್ಲಿ ಪ್ರಸ್ತಾಪಿಸುತ್ತೇನೆ. ಸಮ್ಮೇಳನದ ಮರುದಿವಸ ಪ್ರೊ. ಕೃಷ್ಣಶಾಸ್ತ್ರಿಗಳು ಸೆಂಟ್ರಲ್ ಕಾಲೇಜಿನ ವಿಶಾಲವಾದ ಗಣಿತ ಭವನದಲ್ಲಿ ನನ್ನ ಕವನ ವಾಚನ ಏರ್ಪಡಿಸಿದ್ದರು. ಭವನ ಕಿಕ್ಕಿರಿದಿತ್ತು. ಬೆಂಗಳೂರಿನ ಗಣ್ಯವ್ಯಕ್ತಿಗಳೆಲ್ಲ ಬಂದಿದ್ದರು. ಡಿ.ವಿ. ಗುಂಡಪ್ಪನವರು, ಎಸ್.ಜಿ. ಶಾಸ್ತ್ರಿಗಳು, ಮಾಸ್ತಿ ವೆಂಕಟೇಶ ಐಯ್ಯಂಗಾರರು ಇತ್ಯಾದಿ. ಎಸ್.ಜಿ. ಶಾಸ್ತ್ರಿಗಳು ಸದಸ್ಯರ ಮೊದಲನೆಯ ಪಂಕ್ತಿಯಲ್ಲಿಯೇ ಆಸೀನರಾಗಿದ್ದು ವೇದಿಕೆಯಿಂದ ನೇರ ನನ್ನ ಕಣ್ಣಿಗೆ ಬೀಳುತ್ತಿದ್ದರು. ಆಗಾಗಲೇ ತಕ್ಕಮಟ್ಟಿಗೆ ಪ್ರಸಿದ್ಧವಾಗಿದ್ದ ನನ್ನ ಅನೇಕ ಕವನಗಳನ್ನು ಒಂದಾದಮೇಲೆ ಒಂದರಂತೆ, ಸದಸ್ಯ ವರ್ಗದ ತರುಣ ಮಿತ್ರರು ಕಳುಹಿಸುತ್ತಿದ್ದ ಚೀಟಿಯ ಮಾಲೆಗಳನ್ನು ಅವಲೋಕಿಸಿ, ಹಾಡುತ್ತಿದೆ, ಓದುತ್ತಿದ್ದೆ, ನಾಟಕೀಯವಾಗಿ ವಾಚನ ಮಾಡುತ್ತಿದ್ದೆ. ಚಪ್ಪಾಳೆಯ ಸುರಿ ಮಳೆ ಭವನವನ್ನು ಅನುರಣಿಸಿ ತೊಯ್ಯಿಸಿತ್ತು! ಕಡೆಗೊಮ್ಮೆ ಸಭೆಯ ಒಕ್ಕೊರಲೊ ಎಂಬಂತೆ 'ಕಿಂದರಿ ಜೋಗಿ!', 'ಕಿಂದರಿ ಜೋಗಿ' ಎಂಬ ಉಗ್ಗಡ ಕೇಳಿಸಿತು. ಸರಿ, ಬೊಮ್ಮನಹಳ್ಳಿಯ ಕಿಂದರಿಜೋಗಿಯನ್ನು ತುಸು ರಾಗವಾಗಿ ಅಭಿನಯಪೂರ್ವಕವಾಗಿ ಲಾವಣಿಯಂತೆ ಅನ್ನ ತೊಡಗಿದೆ! ತಟಸ್ಥವಾಗಿದ್ದ ಸದಸ್ಯಸ್ತೋಮ ಸಚಲವಾಯಿತು. ಸಭಾ ಸಮುದ್ರ ನಗೆಯ ಮೆಲುಗಾಳಿಗೆ ತೆರೆ ತೆರೆಯಾಯಿತು. ಬರಬರುತ್ತಾ ಹಾಸ್ಯದ ಕಡೆಗೋಲಿಗೆ ಸಿಕ್ಕಿದಂತೆ ಅಲ್ಲೋಲ ಕಲ್ಲೋಲವಾಯಿತು. ನಗೆ ಅಟ್ಟಹಾಸದ ಮಟ್ಟಕ್ಕೇರಿತು. ಹಾಸ್ಯರಸ ಸಮುದ್ರವೆ ಅಟ್ಟಹಾಸದ ಬಿರುಗಾಳಿಗೆ ಸಿಕ್ಕಿದಂತೆ ಕಡೆಗೊಂಡು ಭೋರ್ಗರೆಯಿತು. ಕರತಾಡನದ ಸಿಡಿಲೂ ಗುಡುಗೂ ಕಿವಿ ಚಿಟ್ಟುಡುವಂತೆ ಭವನವನ್ನಪ್ಪಳಿಸಿತು. 'ಭಟ್ಟಾಶಾಸ್ತ್ರಿಯ ಜನಿವಾರ' 'ಶೇಷಕ್ಕನ ನುಣ್ಣನೆ ಫಣಿವೇಣಿ' ಬರುವ ಹೊತ್ತಿಗೆ ನಕ್ಕು ನಕ್ಕು ಸುಸ್ತಾಗುವಂತಾಗಿತ್ತು ಇಡಿಯ ಸಭೆ. ನೋಡುತ್ತೇನೆ : ಎದುರು ಸಾಲಿನಲ್ಲಿ ಕೂತಿದ್ದ ಹಿರಿಯ ಗಂಭೀರ ವ್ಯಕ್ತಿಗಳೂ ಹೊಟ್ಟೆ ಹುಣ್ಣಾಗುವಂತೆ ಬಿದ್ದು ಬಿದ್ದು ಕೇಕೆ ನಗು ನಗುತ್ತಿದ್ದಾರೆ. ಜರೀಪೇಟ ಧರಿಸಿ ಕೋಟು ಪ್ಯಾಂಟುಗಳಿಂದ ಸೂಟುಧಾರಿಯಾಗಿ ಕುಳಿತಿದ್ದ ಎಸ್.ಜಿ. ಶಾಸ್ತ್ರಿಗಳು ಗಾಂಭೀರ್ಯವನ್ನೆಲ್ಲ ಗಾಳಿಗೆ ತೂರಿ ಬಿದ್ದು ಬಿದ್ದು ನಗುತ್ತಿದ್ದಾರೆ, ಹುಡುಗರಂತೆ. ತಡೆದುಕೊಳ್ಳಲು ಕೈಯನ್ನು ಬಾಯಿಗೆ ಅಡ್ಡವಿಟ್ಟು ಪ್ರಯತ್ನಿಸುತ್ತಿದ್ದಾರೆ. ಆಗದು! ಕಣ್ಣಿನಲ್ಲಿ ನೀರು ಬೇರೆ ಸುರಿಯುತ್ತಿದೆ. ನನ್ನನ್ನೆ ನೇರವಾಗಿ ನೋಡಿ ಹೊಟ್ಟೆ ಕುಲುಕಿ ಮೈಬಾಗಿ ಕುರ್ಚಿಯಿಂದ ಬೀಳುವರೋ ಎಂಬಂತೆ ನಗುತ್ತಿದ್ದಾರೆ, ನಗುತ್ತಿದ್ದಾರೆ, ನಗುತ್ತಿದ್ದಾರೆ! ಆ ದೃಶ್ಯ ಈಗಲೂ ನನಗೆ ಕಣ್ಣಿಗೆ ಕಟ್ಟಿದಂತಿದೆ."[೩]

ಇಲ್ಲಿನ ಛಂದೋಲಯ, ಭಾವಗಳ ಪ್ರಕಟನೆ, ಭಾಷೆಯನ್ನು ದುಡಿಸಿಕೊಂಡಿರುವ ರೀತಿ, ಚಿತ್ರ ಪ್ರಪಂಚ, ನಡು ನಡುವೆ ಎದುರಾಗುವ ಹಾಸ್ಯದ ಚಿತ್ರಗಳು ಅದ್ಭುತವಾಗಿವೆ. ಮಕ್ಕಳಿಗೆ ಕೊಡುವ ಸಂದೇಶವೂ ನಿಷ್ಠೆ, ಧರ್ಮ, ಮಾನವೀಯತೆಯಿಂದ ಕೂಡಿದೆ. ಹಾಗಾಗಿ ಕುವೆಂಪು ಅವರ ಮಾತುಗಳಲ್ಲಿಯೇ ಹೇಳುವುದಾದರೆ 'ಕನ್ನಡ ಸಾಹಿತ್ಯಕ್ಕೂ, ವಿಶೇಷವಾಗಿ ಕನ್ನಡ ನಾಡಿನ ಮಕ್ಕಳಿಗೂ ಲಭಿಸಿದೊಂದು ಸಿರಿಯ ಹೊಂಗಾಣಿಕೆ : ಬೊಮ್ಮನಹಳ್ಳಿಯ ಕಿಂದರಜೋಗಿ!'[೪]

"ಆಶ್ರಮದಲ್ಲಿ ರುಗ್ಣಶಯ್ಯೆಯಲ್ಲಿ ಗುಣಮುಖನಾಗುತ್ತಿದ್ದಾಗಲೆ 'ಹಾಳೂರು' ನೀಳ್ಗವಿತೆಯನ್ನು ಬರೆದ ವಿಚಾರವನ್ನು ಹಿಂದೆಯೆ ಹೇಳಿದ್ದೇನೆ. ಇಲ್ಲಿ ಬೊಮ್ಮನಹಳ್ಳಿಯ ಕಿಂದರಿಜೋಗಿ' ಉದ್ಭವಿಸಿದ ಸನ್ನಿವೇಶವನ್ನು ಕುರಿತು ಎರಡು ಮಾತು ಹೇಳಬಯಸುತ್ತೇನೆ.

ಮೈಸೂರಿನಿಂದ ಊರಿಗೆ ಹೊರಟವನು ಶಿವಮೊಗ್ಗದಲ್ಲಿ ವಾಡಿಕೆಯಂತೆ ಹಲವು ದಿನಗಳನ್ನು ಕಳೆದೆ, ಗೆಳೆಯರ ಜೊತೆಯಲ್ಲಿ, ದೇವಂಗಿ ರಾಮಣ್ಣಗೌಡರ ಅಡಕೆ ಮಂಡಿಯ ಉಪ್ಪರಿಗೆಯಲ್ಲಿ ಭೂಪಾಳಂ ಚಂದ್ರಶೇಖರಯ್ಯ ಮೊದಲಾದ ಮಿತ್ರರು ಬಂದು ಹರಟೆ ಹೊಡೆದು ನನ್ನ ಹೊಸ ಹೊಸ ರಚನೆಗಳ ವಾಚನವನ್ನು ಕೇಳಿ ಆನಂದಿಸಿ ಪ್ರಶಂಶಿಸಿ ಟೀಕಿಸಿ ಲೇವಡಿ ಮಾಡಿ ಕೇಕೆ ಹಾಕಿ ನಕ್ಕು ನಗಿಸಿ ಹೋಗುತ್ತಿದ್ದರು. ಮಾನಪ್ಪ ಆಪ್ತಕಾರ್ಯದರ್ಶಿಯಂತೆ ಆತಿಥ್ಯದ ಬಾರ ವಹಿಸುತ್ತಿದ್ದನು, ಅಲ್ಲದೆ ನನ್ನ ಕವನಗಳನ್ನೆಲ್ಲ ತನ್ನ ಮುದ್ದಾದ ಅಕ್ಷರಗಳಲ್ಲಿ ಒಂದು ನೋಟು ಬುಕ್ಕಿನ ಹಸ್ತಪ್ರತಿಗೆ ಬರೆದುಕೊಡುವ ಶ್ರದ್ಧಾಪೂರ್ವಕ ಕಾರ್ಯವನ್ನೂ ನಡೆಸುತ್ತಿದ್ದನು. ಅವನ ಹಸ್ತಾಕ್ಷರದಲ್ಲಿ ಪ್ರತಿ ಮಾಡಿರುವ ನಾಲ್ಕಾರು ಹಸ್ತಪ್ರತಿಗಳು ನನ್ನಲ್ಲಿ ಈಗಲೂ ಇದ್ದು, ಅವುಗಳನ್ನು ಪ್ರೀತಿಯ ಸ್ಮಾರಕಗಳನ್ನಾಗಿ ಭಾವಿಸಿ ರಕ್ಷಿಸಿದ್ದೇನೆ. ನಾನು ಶ್ರೀ ರಾಮಕೃಷ್ಣಾಶ್ರಮದಲ್ಲಿ ರುಗ್ಣಶಯ್ಯೆಯಲ್ಲಿದ್ದಾಗ ಗೀಚಿ ಬರೆದಿದ್ದ 'ಹಾಳೂರು' ನೀಳ್ಗವಿತೆಯನ್ನು ದಪ್ಪ ರಟ್ಟಿನ ನೋಟುಬುಕ್ಕಿಗೆ ಮುದ್ದಾಗಿ ಪ್ರತಿಯೆತ್ತಿ, ಅದರ ತುದಿಯಲ್ಲಿ ೧೮th Nov. ೧೯೨೬, copied by Dr. Manappa ಎಂದು ರುಜು ಹಾಕಿದ್ದಾನೆ. ಅದು ಮುಗಿದ ತರುವಾಯದ ಎರಡನೆ ಪುಟದಲ್ಲಿ 'ಬೊಮ್ಮನಹಳ್ಳಿಯ ಕಿಂದರಿಜೋಗಿ'ಯನ್ನು ಪ್ರತಿ ಮಾಡಿ ತುದಿಯಲ್ಲಿ Copied by DRM, ೧೯th Nov. ೧೯೨೬ ಎಂದು ಸಹಿ ಹಾಕಿದ್ದಾನೆ. ಅಂದರೆ 'ಬೊಮ್ಮನಹಳ್ಳಿಯ ಕಿಂದರಿಜೋಗಿ' ರಚನೆ ಒಂದೆ ದಿನದಲ್ಲಿ ನಡೆದದ್ದು, ಕೆಲವು ಗಂಟೆಗಳೊಳಗೆ.

ಅನೇಕರು ಅದನ್ನು ಬ್ರೌನಿಂಗ್ ಕವಿಯ ಪೈಡ್ ಪೈಪರ್ ಆಫ್ ಹ್ಯಾಮಲಿನ್ ಕವಿತೆಯ ಭಾಷಾಂತರವೆಂದು ಭಾವಿಸಿದ್ದಾರೆ. ಅದು ಮೊದಲು 'ಕಿರಿಯ ಕಾಣಿಕೆ'ಯಲ್ಲಿ ಮಹಾರಾಜಾ ಕಾಲೇಜಿನ ಕರ್ನಾಟಕ ಸಂಘದಿಂದ ೧೯೨೮ರಲ್ಲಿ ಪ್ರಕಟವಾದಾಗ ಅದು ಬ್ರೌನಿಂಗ್ ಕವಿಯ ಕವಿತೆಯ ಆಧಾರದ ಮೇಲೆ ರಚಿತವಾದದ್ದು ಎಂಬ ಉಲ್ಲೇಖವಿದೆ. ಅದು ಯಾವ ದೃಷ್ಟಿಯಿಂದ ಪರಿಶೀಲಿಸಿದರೂ ಭಾಷಾಂತರವಾಗುವುದಿಲ್ಲ; ಕಡೆಗೆ ಸಮೀಪದ ಅನುವಾದ ಕೂಡ ಆಗುವುದಿಲ್ಲ. ಅದನ್ನು ಬರೆಯುವಾಗ ಶಿವಮೊಗ್ಗದಲ್ಲಿ ನನ್ನ ಬಳಿ ಬ್ರೌನಿಂಗ್ ಕೃತಿ ಇರಲಿಲ್ಲ. ಅಷ್ಟೇ ಅಲ್ಲ ಇಂಗ್ಲಿಷಿನಲ್ಲಿ ಅದನ್ನು ವೆಸ್ಲಿಯನ್ ಮಿಷನ್ ಹೈಸ್ಕೂಲಿನಲ್ಲಿ ನಾನು ಐದನೆ ಫಾರಂನಲ್ಲಿ ಓದುತ್ತಿದ್ದಾಗ ಪಠ್ಯಪುಸ್ತಕದಲ್ಲಿ ಓದಿದ್ದೆನೆ ಹೊರತು ಆಮೇಲೆ ಅದನ್ನು ಓದಿರಲೂ ಇಲ್ಲ. ಆದ್ದರಿಂದ ಅದು ಭಾಷಾಂತರವೂ ಅಲ್ಲ, ಅನುವಾದವೂ ಅಲ್ಲ. ಆ ಕಥೆಯ ನೆನಪಿನ ಆಧಾರದ ಮೇಲೆ ರಚಿತವಾದದ್ದು ಎಂದು ಹೇಳಬಹುದು.

ನನಗಿನ್ನೂ ವಿಶದವಾದ ನೆನಪಿದೆ. ಬೆಳಿಗ್ಗೆ ಸ್ನಾನ ಕಾಫಿ ತಿಂಡಿ ಪೂರೈಸಿ ಉಪ್ಪರಿಗೆಗೆ ಹೋಗಿ, ಒಂದು ಮೇಜಿನ ಮುಂದಿದ್ದ ಕುರ್ಚಿಯ ಮೇಲೆ ಕುಳಿತು, ಬಿಡಿ ಹಾಳೆಗಳಲ್ಲಿ ಬರೆಯತೊಡಗಿದೆ. ಒಂದೊಂದೆ ಹಾಳೆ ತುಂಬಿದಂತೆಲ್ಲ ಅದನ್ನು ಕೆಳಗೆ ಹಾಕುತ್ತಿದ್ದೆ. ಮಾನಪ್ಪ ಈಗ ನನ್ನ ಬಳಿ ಇರುವ ನೋಟುಬುಕ್ಕಿನ ಹಸ್ತಪ್ರತಿಗೆ ಅದನ್ನು ಕಾಪಿ ಮಾಡುತ್ತಾ ಹೋಗುತ್ತಿದ್ದ. ಮಧ್ಯಾಹ್ನದ ಊಟದ ಹೊತ್ತಿಗೆ ಬರೆಯುವುದೂ ಪೂರೈಸಿತ್ತು. ಅಂದರೆ ಅದರ ರಚನೆಗೆ ಸುಮಾರು ನಾಲ್ಕು - ಐದು ಗಂಟೆ ಹಿಡಿದಿತ್ತು.”

> ಶ್ರೀ ಸುಂದರ ಅವರು ಕ್ರೈಸ್ತರು ಆಗತಾನೆ ಇಂಗ್ಲಿಷ್ ಎಂ.ಎ. ಪಾಸು ಮಾಡಿ ಬಂದಿದ್ದರೆಂದು ತೋರುತ್ತದೆ. ಆದ್ದರಿಂದಲೇ ಪಾಠ ಹೇಳುವುದರಲ್ಲಿ ಒಂದು ಚೈತನ್ಯಪೂರ್ಣವಾದ ಸಂತೋಷವಿದ್ದು ಆಲಿಸುತ್ತಿದ್ದ ವಿದ್ಯಾರ್ಥಿಗಳನ್ನು ಸೆಳೆಯುತ್ತಿತ್ತು. ಒಂದು ದಿನ ಅವರು ಬ್ರೌನಿಂಗ್ ಕವಿಯ 'ಪೈಡ್ ಪೈಪರ್ ಆಫ್ ಹ್ಯಾಮಲಿನ್' ಅನ್ನು ತರಗತಿಯಲ್ಲಿ ನಾಟಕೀಯವಾಗಿ ಓದಿ, ಇಂಗ್ಲಿಷಿನಲ್ಲಿಯೇ

ಅಲ್ಲಲ್ಲಿ ತುಸು ಅರ್ಥ ವಿವರಣೆಯನ್ನೂ ಕೊಡುತ್ತಾ (ಇಂಗ್ಲಿಷ್ ಅಧ್ಯಾಪಕರು ಇಂಗ್ಲಿಷ್ ಪಾಠ ಮಾಡುವಾಗ ಕನ್ನಡದ ಪ್ರಯೋಗ ನಿಷಿದ್ಧವಾಗಿತ್ತು. ಹಾಗೇನಾದರು ಕನ್ನಡದಲ್ಲಿ ಮಾತಾಡಿದರೆ ಬೋಧನೆಯ ಪವಿತ್ರತೆಗೇ ಭಂಗವೆಂದು ಭಾವಿಸಲಾಗುತ್ತಿತ್ತು. ಕನ್ನಡದಲ್ಲಿ ಮಾತಾಡುವುದು ಅವಮಾನಕರವೆಂದೂ ಸರ್ವರು ಒಪ್ಪಿಕೊಂಡ ನಿರ್ಣಾಯಕ ವಿಷಯವಾಗಿತ್ತು) ತಾವು ಬಿದ್ದು ಬಿದ್ದು ನಗುತ್ತಾ ವಿದ್ಯಾರ್ಥಿಗಳನ್ನು ನಗೆಯ ಹೊನಲಿನಲ್ಲಿ ತೇಲಿಸಿಬಿಟ್ಟರು. ಆ ಕವಿತೆಯ ಸ್ವಾರಸ್ಯ, ಅದರ ಹಾಸ್ಯರಸ ಅವರು ಓದಿದ ಧಾಟಿಯಿಂದಲ್ಲದೆ ಅಭಿವ್ಯಕ್ತವಾಗುತ್ತಿರಲಿಲ್ಲ. ಸಾಮಾನ್ಯವಾಗಿ, ಪಠ್ಯ ವಿಷಯವಾಗುವ ಸಾಹಿತ್ಯ ಭಾಗ ಪರೀಕ್ಷೆ ದೃಷ್ಟಿಯಿಂದ ಓದುವ ವಿದ್ಯಾರ್ಥಿಗಳಲ್ಲಿ ವೈರಭಾವವನ್ನೇ ಉದ್ರೇಕಿಸುವುದು ವಾಡಿಕೆ. ಆದರೆ 'ಪೈಡ್ ಪೈಪರ್ ಆಫ್ ಹ್ಯಾಮಲಿನ್' ತನ್ನ ನೃತ್ಯಮಯ ಶೈಲಿಯಿಂದಲೂ ಬಾಲಕ ಚೇತನಗಳಿಗೆ ಕಚಗುಳಿಯಿಟ್ಟು ನಗಿಸುವಂತಹ ಹಾಸ್ಯದಿಂದಲೂ ನನ್ನ ಮೆಚ್ಚಿಗೆಯನ್ನು ಸೂರೆಗೊಂಡಿತು. ಅದು ಎಷ್ಟರಮಟ್ಟಿಗೆ ನನ್ನ ಅಂತಃಕರಣದ ಭಾವಕೋಶವನ್ನು ಪ್ರವೇಶಿಸಿತ್ತು ಎಂದರೆ ಮುಂದೆ ೧೯೨೬ರಲ್ಲಿ ಅಂದರೆ ಆರೇಳು ವರ್ಷಗಳ ತರುವಾಯ, ಶಿವಮೊಗ್ಗೆಯಲ್ಲಿ ನಾನು ಕಾಯಿಲೆಯಿಂದ ಗುಣಮುಖನಾಗುತ್ತಿದ್ದಾಗ ಆ ಕಥೆಯನ್ನು ಆಧರಿಸಿ "ಬೊಮ್ಮನಹಳ್ಳಿಯ ಕಿಂದರಿಜೋಗಿ"ಯನ್ನು ರಚಿಸಿದಾಗ ಇಂಗ್ಲಿಷ್ ಭಾಷೆಯ ಮೂಲ ಕವಿತೆ ನನ್ನ ಬಳಿ ಇರಲೆ ಇಲ್ಲ. 'ಬೊಮ್ಮನಹಳ್ಳಿಯ ಕಿಂದರಿಜೋಗಿ'ಯನ್ನು ಬ್ರೌನಿಂಗ್ ಕವಿಯ ಕಥನ ಕವನದ ಭಾಷಾಂತರವೆಂದು ಅನೇಕರು ತಪ್ಪಾಗಿ ತಿಳಿದಿದ್ದಾರೆ. ಅದು ಭಾಷಾಂತರವೂ ಅಲ್ಲ, ಅನುವಾದವೂ ಅಲ್ಲ. ಆ ಕಥೆಯನ್ನು ಆಧರಿಸಿರುವ ರೂಪಾಂತರ ಸೃಷ್ಟಿ.[೬]

ಈ ಮೇಲಿನ ಎರಡೂ ದೀರ್ಘವಾದ ಉದ್ಧರಣೆಗಳಲ್ಲಿ ಬೊಮ್ಮನಹಳ್ಳಿಯ ಕಿಂದರಿಜೋಗಿ ಕವಿತೆಗೆ ಪ್ರೇರಕವಾದ ಪ್ರಭಾವ ಪರಿಣಾಮಗಳನ್ನು ಕುವೆಂಪು ಸ್ಪಷ್ಟಪಡಿಸಿದ್ದಾರೆ. ಬ್ರೌನಿಂಗ್ ಕವಿಯ 'ಪೈಡ್ ಪೈಪರ್ ಆಫ್ ಹ್ಯಾಮಲಿನ್' ಕವಿತೆಯ ಭಾಷಾಂತರವೆಂದು ಗುರುತಿಸುವ ವಿಮರ್ಶಕರಿಗೆ ಕಿವಿ ಮಾತನ್ನು ಹೇಳಿದ್ದಾರೆ. ಅಂದರೆ ಈ ಕವಿತೆಗೆ ಪ್ರೇರಕವಾದ ಬ್ರೌನಿಂಗ್ ಕವಿಯ ಕವಿತೆಯನ್ನು ತಾವು ಹೈಸ್ಕೂಲ್‌ನಲ್ಲಿ ಓದಿದ, ತಮ್ಮ ಇಂಗ್ಲಿಷ್ ಅಧ್ಯಾಪಕರಾದ ಶ್ರೀ ಸುಂದರಂ ಅವರಿಂದ ಕೇಳಿದ ಅನುಭವವನ್ನು ದಾಖಲಿಸಿದ್ದಾರೆ. ಹಾಗೆಯೇ ಈ ಕವನ ಬ್ರೌನಿಂಗ್ ಕವಿಯ ಭಾಷಾಂತರವೂ ಅಲ್ಲ. ಅನುವಾದವೂ ಅಲ್ಲ. ಆ ಕಥೆಯನ್ನು ಆಧರಿಸಿದ ರೂಪಾಂತರ ಸೃಷ್ಟಿ ಎಂಬ ವಿಷಯವನ್ನು ಸ್ಪಷ್ಟಪಡಿಸುವುದರ ಮೂಲಕ ಈ ಕವಿತೆಯ ಅರ್ಥಸಾಧ್ಯತೆಗಳಿಗೆ ಪೂರ್ವಪೀಠಿಕೆಯನ್ನು ನೀಡಿದ್ದಾರೆ. ಈ ಕವಿತೆಯ ರಚನೆಗೆ ಮೂಲ ಪ್ರೇರಕವಾದ ಬ್ರೌನಿಂಗ್ ಕವಿಯ ಕವಿತೆಗೆ ಪ್ರೇರಕವಾದ ಯಾವ ಅಂಶಗಳು ಕಿಂದರಿಜೋಗಿಯ ಕವಿತೆಯ ಅಭಿವ್ಯಕ್ತಿಯ ಹಿನ್ನೆಲೆಗಿಲ್ಲವೆಂಬ ಅರಿವು ಈ ಮೇಲಿನ ಉದ್ಧರಣೆಗಳಿಂದ ಕಂಡು ಬರುತ್ತದೆ. ಆದರೆ ಜಿ.ಎಸ್. ಶಿವರುದ್ರಪ್ಪ ಅಂಥ ವಿಮರ್ಶಕರು ಪೈಡ್ ಪೈಪರ್ ಆಫ್ ಹ್ಯಾಮಲಿನ್ ಕವಿತೆಗೆ ಕಾರಣವಾದ ಚಾರಿತ್ರಿಕ ಅಂಶಗಳನ್ನು ಕಿಂದರಿಜೋಗಿ ಕವಿತೆಯ ಹಿನ್ನೆಲೆಗೆ ಮುಖ್ಯ ಮಾಡಿಕೊಂಡು ಈ ಕವಿತೆಯ ವಿಶ್ಲೇಷಣೆಯನ್ನು ಮಾಡಿದ್ದಾರೆ. ಅಂಥ ಚಾರಿತ್ರಿಕ ಸಂಗತಿಯೊಂದರ ಆಧಾರದ ಮೇಲೆ ಈ ಕವಿತೆಯ ವಸ್ತುವನ್ನು "ಅಪರಾಧ ಮತ್ತು ಶಿಕ್ಷೆ"ಯ ನೆಲೆಯಲ್ಲಿ ಅರ್ಥೈಸಿರುತ್ತಾರೆ. ಮಕ್ಕಳ ಕವಿತೆ ಎಂಬ ಕಾರಣಕ್ಕಾಗಿ ಅನೇಕ ವರ್ಷಗಳ ಕಾಲ ಉಪೇಕ್ಷೆ ಮಾಡಿ ಈಗ ಆ ಕವಿತೆಯಲ್ಲಿ ದುರಂತ ಪ್ರಜ್ಞೆಯನ್ನು ಹುಡುಕುವ ಸಂವೇದನೆಯ ಬಗ್ಗೆ ಅನುಮಾನ ಬರುತ್ತದೆ.

ಈ ಕವಿತೆಯಲ್ಲಿ ಎದುರಾಗುವ ಪ್ರಭುತ್ವದ ಭ್ರಷ್ಟತೆ, ಅಧಃಪತನ, ಸಮಾಜದಲ್ಲಿ ಉಲ್ಬಣಗೊಂಡಿರುವ ಸಮಸ್ಯೆಗಳನ್ನು ಪರಿಹರಿಸಲು ಜೋಗಿಯಂಥ ಅತಿಮಾನುಷ ಶಕ್ತಿಯೇ ಬರಬೇಕಾಗಿದೆ. ಜೋಗಿಯನ್ನು ಹಿಂಬಾಲಿಸುವ ಮಕ್ಕಳು ತಾವು ಕನಸಿದ ಆದರ್ಶ ರಾಜ್ಯಕ್ಕೆ ಪ್ರವೇಶ ಪಡೆಯುವುದು. ಅಂಥ ಪ್ರವೇಶವೇ ತಂದೆ ತಾಯಿಗಳಿಗೆ ಆದ ಶಿಕ್ಷೆಯೆಂದು ಭಾವಿಸುವುದು ಒಂದು ಬಗೆಯ ಓದಾದರೂ ಈ ಕವಿತೆಯ ಕೇಂದ್ರ ಆಶಯವನ್ನು ಇಂಥ ವಿಮರ್ಶೆ ಹಿಡಿಯಲಾಗಿಲ್ಲ. ಇಡೀ ಊರಿನ ಬದುಕಿಗೆ ಅಂಟಿದ ಸಾಮಾಜಿಕ ಪೀಡೆಯನ್ನು ಇಲ್ಲವಾಗಿಸುವ, ಅಂಥ ಸಮಾಜದಿಂದ ಮಕ್ಕಳನ್ನು ಆದರ್ಶ ರಾಜ್ಯಕ್ಕೆ ಕರೆದೊಯ್ಯುವ ಕುವೆಂಪು ಸಂವೇದನೆ ಹೊಸ ಆಧುನಿಕ ಸಮಾಜದ ಕಡೆಗೆ ಮಕ್ಕಳನ್ನು ಕೊಂಡೊಯ್ಯುವ ಕೆಲಸವನ್ನು ಇಲ್ಲಿ ಅತ್ಯಂತ ಸಮರ್ಥವಾಗಿ ನಿರ್ವಹಿಸಿದ್ದಾರೆ. ಕುವೆಂಪು ಕನಸಿದ ಆಧುನಿಕ ಸಮಾಜದಲ್ಲಿ ಜಾತಿಯ ವೈಷಮ್ಯ, ಸಾಮಾಜಿಕ ಕೃತ್ರಿಮತೆ, ಪ್ರಭುತ್ವದ ಕ್ರೌರ್ಯಾವಸ್ಥೆಗಳಿಲ್ಲದ ಆದರ್ಶ ರಾಜ್ಯವೊಂದನ್ನು ಮಕ್ಕಳ ಮುಂದಿಡುತ್ತಾರೆ.

'ಬೊಮ್ಮನಹಳ್ಳಿಯ ಕಿಂದರಿಜೋಗಿ' ಕೃತಿಯನ್ನು ಕುರಿತು ಪ್ರಕಟವಾದ ಅನೇಕ ವಿಮರ್ಶೆಗಳಲ್ಲಿ ಅದರ ಧ್ವನಿಶಕ್ತಿಯನ್ನು ವಿವರಿಸದಿರುವುದು ಒಂದರ್ಥದಲ್ಲಿ ಕೊರತೆಯೆಂದು ತಿಳಿಯಬೇಕಾದ ಅಗತ್ಯವಿಲ್ಲವೆಂದೆನಿಸುತ್ತದೆ. ಹಾಗೆಯೇ ಜಿ.ಎಸ್. ಶಿವರುದ್ರಪ್ಪನವರಂತೆ ಹಠಕ್ಕೆ ಬಿದ್ದು ಪಾಶ್ಚಾತ್ಯ ಸಂದರ್ಭವೊಂದರ ದುರಂತತೆಯ ಅರ್ಥವನ್ನು ಕನ್ನಡದ ಸಂದರ್ಭಕ್ಕೆ ತಂದು ಅರ್ಥೈಸುವ ಅಗತ್ಯವೂ ಇಲ್ಲ. ಕಿಂದರಿಜೋಗಿಯ ವಿಶಿಷ್ಟವಾದ ಗುಣಗಳೇ ಮಕ್ಕಳಿಗೂ, ಓದುಗರಿಗೂ ಅರ್ಥವನ್ನು ಧ್ವನಿಸುವ ಸಹಜತೆ ಆ ಕವಿತೆಗೆ ಇರುವುದರಿಂದಲೇ ಸೀಮಿತ ಅರ್ಥದಲ್ಲಿ ಕಟ್ಟಿಹಾಕುವ ಕೆಲಸವನ್ನು ಕನ್ನಡ ಸಂವೇದನೆ ಮಾಡಿಲ್ಲದಿರುವುದು ಸಹಜವೇ ಆಗಿದೆ.

**ಅಡಿಟಿಪ್ಪಣಿ :**

೧. ಕುವೆಂಪು, ಬೊಮ್ಮನಹಳ್ಳಿಯ ಕಿಂದರಿಜೋಗಿ, ಉದಯರವಿ ಪ್ರಕಾಶನ, ಮೈಸೂರು, ೧೯೭೩, ಪು - ೨೭

೨. ಕೆ.ವಿ. ಪುಟ್ಟಪ್ಪ, ಕಿಂದರಿಜೋಗಿ ಮತ್ತು ಇತರ ಕಥನ ಕವನಗಳು, ಕಾವ್ಯಾಲಯ, ಶಿವಮೊಗ್ಗ, ೧೯೩೬, ಬಿ.ಎಂ.ಶ್ರೀ ಮುನ್ನುಡಿ, ಪು - III

೩. ಕುವೆಂಪು, ನೆನಪಿನ ದೋಣಿಯಲ್ಲಿ ೧, ಸಹ್ಯಾದ್ರಿ ಪ್ರಕಾಶನ, ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು, ೧೯೮೦, ಪು - ೮೧೬-೮೧೭

೪. – ಅದೇ –, ಪು - ೭೦೯-೭೧೦

೫. – ಅದೇ –, ಪು - ೧೦೯-೧೧೦

೬. – ಅದೇ –, ಪು - ೧೪೧.

* * *

## ೮. ಶಿಶು ಗೀತಾಂಜಲಿ : ಲೌಕಿಕ ಬದುಕಿಗೆ ಮುಖಾಮುಖಿ

ಭೌತಿಕ, ಅಭೌತಿಕ ಸಂಗತಿಗಳ ಬಗೆಗಿನ ಮಗುವಿನ ಸಹಜ ಕುತೂಹಲ, ವಿಸ್ಮಯ ಚಿತ್ರಗಳು 'ಶಿಶುಗೀತಾಂಜಲಿ' ಕೃತಿಯ ಮುಖ್ಯ ನೆಲೆ. ಮಗು ಪ್ರಾಪಂಚಿಕ ಸಂಗತಿಗಳ ಬಗ್ಗೆ ತಾಯಿಯೊಂದಿಗೆ ನಡೆಸುವ ಸಂವಾದ, ಸಾಂಪ್ರದಾಯಿಕ ನಂಬಿಕೆ, ಅರ್ಥಗಳಿಗೆ ಮುಖಾಮುಖಿಯಾಗುವ ಕ್ರಮವು ವಿಶಿಷ್ಟವಾದುದು. 'ಅರ್ಧಚಂದ್ರ', 'ಸಂಜೆಯ ರವಿ', 'ಒಡವೆಗಳು', 'ಮೂರ್ತಿಯ ಚಂದ್ರ', 'ತಿಂಗಳ್ ಮಾವ', 'ಹಣ', ಮೂರ್ತಿಯ ಬೆಳ್ಮುಗಿಲು - ಇಂಥ ಕವನಗಳು ದೈನಂದಿನ ಬದುಕಿನಲ್ಲಿ ಎದುರಾಗುವ ವಸ್ತು ಮತ್ತು ಘಟನೆಗಳನ್ನು ಒಳಗೊಂಡಿವೆ. ಇಂಥ ಘಟನೆಗಳಿಗೆ ಮಗು ಮುಗ್ಧತೆಯಿಂದ ಪ್ರತಿಕ್ರಿಯಿಸುವ ಕ್ರಮದಲ್ಲಿಯೇ ಕುವೆಂಪು ಮಕ್ಕಳಲ್ಲಿ ವೈಚಾರಿಕತೆಯ ಅಡಿಪಾಯ ಹಾಕುತ್ತಿರುವುದನ್ನು ಕಾಣಬಹುದು. ಆ ಮುಖೇನ ಸೃಷ್ಟಿಕ್ರಿಯೆ ಹಾಗೂ ಮಾನವೀಯ ಸಂಬಂಧಗಳ ಬಗೆಗೆ ಕಾಳಜಿಯನ್ನು ಉಂಟು ಮಾಡುತ್ತಿದ್ದಾರೆ. ಮಕ್ಕಳನ್ನು ಪ್ರಶ್ನಿಸುವ ಆಲೋಚಿಸುವ ಮನೋಭಾವಕ್ಕೆ ಹಚ್ಚುವ ಮುಖೇನ ಅವರನ್ನು ವೈಜ್ಞಾನಿಕವಾಗಿ ಮತ್ತು ವೈಚಾರಿಕವಾಗಿ ಚಿಂತಿಸುವಂತೆ ಮಾಡುವ ಪ್ರಕ್ರಿಯೆ ಇಲ್ಲಿ ಗಾಢವಾಗಿದೆ.

ತಾಯಿ ಮತ್ತು ಮಕ್ಕಳ ನಡುವಿನ ಪ್ರೀತಿ ಅಂತ್ಯವಿಲ್ಲದ್ದು. ಅದು ಹಂತ ಹಂತವಾಗಿ ಬೆಳೆಯುತ್ತಾ ಹೋಗಿ ಒಂದು ನಿಶ್ಚಿತ ಸ್ವರೂಪವನ್ನು ಪಡೆದುಕೊಳ್ಳುತ್ತದೆ. ಆಗ ತಾಯಿ ಪ್ರೀತಿ, ಪ್ರೇಮ, ಸ್ನೇಹಗಳ ಸಂಕೇತವಾಗಿ ದೇವರ ಪ್ರತಿರೂಪವಾಗಿ, ಅಜ್ಞಾನವನ್ನು ತೊಲಗಿಸುವ ಗುರುವಾಗಿ, ಐಶ್ವರ್ಯ ಮತ್ತು ಶ್ರೀಮಂತಿಕೆಯ ಪ್ರತಿನಿಧಿಯಾಗಿ, ಮಗುವಿನ ಮುಗ್ಧ ಪ್ರಶ್ನೆಗಳನ್ನು ಆಲಿಸುವ ಸಹನಾಶೀಲಳಾಗಿ, ಪ್ರಕೃತಿಯ ಪ್ರತಿರೂಪವಾಗಿ ಗುರುತಿಸಲ್ಪಡುತ್ತಾಳೆ. ಇಂಥ ಸನ್ನಿವೇಶಗಳು 'ಶಿಶು ಗೀತಾಂಜಲಿ'ಯಲ್ಲಿ ಸಾಕಷ್ಟಿವೆ.

ಗಗನದೊಳಲೆಯುವ ಅರ್ಧಚಂದ್ರನು ಮಗುವಿಗೆ ದೇವರ ಪೆಪ್ಪರಮೆಂಟಾಗಿ ಕಾಣುತ್ತಾನೆ. ಎಷ್ಟೇ ತಿಂದರೂ ಖರ್ಚೇ ಆಗದ ಬೆಳೆಯುವ ಪೆಪ್ಪರಮೆಂಟಾಗಿ ಆಶ್ಚರ್ಯ, ಕೌತುಕಗಳನ್ನು ಮೂಡಿಸುತ್ತಾನೆ. ಅರ್ಧಚಂದ್ರನಿಗೆ ಆಕರ್ಷಿತನಾದ ಮಗು ಇದು ನನಗೂ ದೊರಕುವುದೇನಮ್ಮ ಎಂದು ಪ್ರಶ್ನಿಸಲು ತಾಯಿ ದೇವರ ಬಾಲಕನಾಗಲು ನಿನಗೂ ಕೊಡುವನು ಎನ್ನುತ್ತಾಳೆ. ಆಗ ಆ ಮಗು

ದೇವರ ಬಾಲಕನಾಗಲು ಒಲ್ಲೆ
ಆತನ ಮೀರಿಹೆ ನೀನಮ್ಮಾ!
ತಾಯಿಯನಗಲಿಸಿ ದೇವರ ಹಿಡಿಸುವ
ಪೆಪ್ಪರಮೆಂಟೂ ಬೇಡಮ್ಮಾ![೧]

ಎನ್ನುತ್ತಾ ಹೆತ್ತ ತಾಯನ್ನೇ ದೇವತಾ ಸ್ವರೂಪಿಣಿಯಾಗಿ ಕಾಣುತ್ತಿದೆ. ಅಂತೆಯೇ ತಾಯಿಯ ಅಗಲಿಕೆ ಮಗುವಿಗೆ ಬೇಸರದ ದನಿಯಾಗಿ ಕಾಣಿಸುತ್ತದೆ.

ತಾಯಿಯನ್ನು ಗುರುವನ್ನಾಗಿಸಿಕೊಂಡು ಬಾಲಕ ಕೆಲ ಪ್ರಶ್ನೆಗಳ ಮೂಲಕ ತಾಯಿಗೆ ಮುಖಾಮುಖಿಯಾಗುತ್ತಾನೆ. ಸಂಪಗೆ ಹೂವನು ಸಂಪಗೆ ಹೂವೆಂದೇತಕೆ ಕರೆವರು ಹೇಳಮ್ಮಾ! ಎಂದು ಕೇಳುತ್ತಾ ಸಂಪಗೆಗಿಂತಲು ತಂಪಿಗೆ ಎಂದಿರೆ ಇಂಪಾಗಿರುವುದು ಕೇಳ್ವರಿಗೆ, ಎನ್ನುವ ತನ್ನ ಸಲಹೆಯನ್ನು ಮುಂದಿಡುತ್ತಿದ್ದಾನೆ. ಪ್ರಶ್ನೆ ಕೇಳುವ ಮನೋಭಾವ ಸಣ್ಣ ಮಕ್ಕಳಲ್ಲಿ ಬೆಳೆಯಬೇಕು ಎನ್ನುವ ಕವಿಯ ತೀವ್ರತರವಾದ ಹಂಬಲ ಒಂದೆಡೆಯಾದರೆ ಪಾರಂಪರಿಕವಾಗಿ ಬೆಳೆದು ಬಂದಿರುವುದನ್ನು ಪ್ರಶ್ನಿಸಿ ಒಪ್ಪಿಕೊಳ್ಳಬೇಕೇ ಹೊರತು ಹಿಂದೆ ನಡೆದು ಬಂದದ್ದೆಲ್ಲವನ್ನು ಒಪ್ಪಿಕೊಳ್ಳುವುದು ಎಷ್ಟರಮಟ್ಟಿಗೆ ಸರಿ ಎಂಬ ವಾದ ಮತ್ತೊಂದೆಡೆ. ತೀರಾ ಸಾಮಾನ್ಯವಾದದ್ದನ್ನು ಪ್ರಶ್ನಾವಳಿಗಳ ಮೂಲಕವೇ ತಿಳಿದುಕೊಳ್ಳಲು ಪ್ರಯತ್ನಿಸುವುದು ಆತನಲ್ಲಿರುವ ಕೌತುಕತೆಯನ್ನು ಧ್ವನಿಸುತ್ತದೆ. ಸಂಪಗೆ ಹೂವನು ತಂಪಿಗೆ ಹೂವೆಂದು ಕರೆದು ತನ್ನ ಮೂಲಕ ಸಾಂಪ್ರದಾಯಿಕ ನಂಬಿಕೆಯನ್ನು ಹೊಡೆದು ಹೊಸತನ್ನು ಕಟ್ಟುವ ಪ್ರಯತ್ನ ಮಾಡುತ್ತಿದ್ದಾನೆ.

ನನ್ನೀ ಶಿಶುತನ ನಿನ್ನೀ ತಾಯ್ತನ
ಎರಡೇ ಒಡವೆಗಳೆಮಗಮ್ಮಾ :
ನಾ ನಿನಗೊಡವೆಯು; ನೀನನಗೊಡವೆಯು;
ಬೇರೆಯ ಒಡವೆಗಳೇಕಮ್ಮಾ?[೨]

ಎನ್ನುವ ಮಗುವಿನ ಮುದ್ದು ಮಾತುಗಳು ಸಮಾಜದ ಎಲ್ಲಾ ವಲಯಗಳಲ್ಲಿ ವ್ಯಾಪಕವಾಗಿ ಬೇರೂರಿರುವ ಶ್ರೀಮಂತಿಕೆಯ ಹುಚ್ಚನ್ನು ವ್ಯಂಗ್ಯಕ್ಕೆ ಗುರಿಪಡಿಸುತ್ತಿವೆ. ಎಲ್ಲಾ ವಸ್ತುಗಳಿಗೂ ಆಕರ್ಷಿತವಾಗುವ ಸಣ್ಣ ಮಗುವಿಗೆ ಈ ಚಿನ್ನದ ಒಡವೆಗಳು ಮತ್ತು ಬಣ್ಣದ ಬಟ್ಟೆಗಳು ಬಂಧನದಂತಿವೆ. ಆತನ ಆಟೋಟಪಾಠಗಳಿಗೆ ತೊಂದರೆ ಕೊಡುತ್ತವೆ. ಹಾಗಾಗಿ ಆ ಪುಟ್ಟ ಮಗುವಿಗೆ ಶಿಶುತನ ಮತ್ತು ತಾಯ್ತನಗಳು ಬೆಲೆಕಟ್ಟಲಾಗದ ವಿಚಾರವಾಗಿದೆ. ತಾಯಿ ಮತ್ತು ಮಗು ಇಲ್ಲಿ ಪರಸ್ಪರ ಒಡವೆಗಳಾಗಿದ್ದಾರೆ. ವಸ್ತು ವೈವಿಧ್ಯದಲ್ಲಿ, ಪದಾರ್ಥ ವ್ಯಾಮೋಹ ಧೋರಣೆಯಲ್ಲಿ ಮುಳುಗಲು ಯತ್ನಿಸುತ್ತಿರುವ ಮಾನವನಿಗೆ ಇವು ಬುದ್ಧಿ ಮಾತುಗಳಂತೆ ಕಂಡುಬರುತ್ತವೆ.

ಚಂದ್ರನ ಮೂರ್ತಿಯನ್ನು ಬಾಲಕ ತನ್ನವನನ್ನಾಗಿ ಮಾಡಿಕೊಂಡು ಅಮ್ಮನಿಗೂ ಚಂದಿರ ನಿನ್ನವನೆಂದು ಪರಿಚಯಿಸುತ್ತಿದ್ದಾನೆ. ಸೌಂದರ್ಯದ ಉತ್ತುಂಗತೆಯಲ್ಲಿ ಕವಿ ಮನಸ್ಸು ಚಂದಿರನನ್ನು ತನ್ನವನ್ನಾಗಿ ಭಾವಿಸಿಕೊಂಡು ತನಗಾದ ಅನುಭವವನ್ನು ಬಾಲಕನ ಮೂಲಕ ಸ್ಪಷ್ಟಪಡಿಸುತ್ತಿದೆ. ಚಂದಿರನ ಪ್ರದಕ್ಷಿಣ ಪಥವನ್ನು ಅಷ್ಟೇ ಸೂಕ್ಷ್ಮವಾಗಿ ಗಮನಿಸಿದ ಬಾಲಕ "ಎಲ್ಲಿಗೆ ನಾ ಹೋದರೆ ಅಲ್ಲಿಗೆ ಬರುವನು ಅಮ್ಮಾ ಚಂದಿರ ನನ್ನವನು" ಎಂದು ಚಂದಿರನನ್ನು ತನ್ನ ವಶಕ್ಕೆ ಒಪ್ಪಿಸಿಕೊಳ್ಳುತ್ತಿದ್ದಾನೆ. ತಾಯಿಗೆ ಒಪ್ಪಿಸುವ ರೀತಿಯಲ್ಲಿ ಇಲ್ಲಿನ ಅನೇಕ ಕವನಗಳು ರೂಪುಗೊಂಡಿವೆ. ಮಗುವಿನ ಸಹಜ ಮುಗ್ಧತೆ ಮತ್ತು ತಾಯಿಯ ಆಶ್ಚರ್ಯ ಇಲ್ಲಿನ ಕವನಗಳಲ್ಲಿ ಸಂಲಗ್ನಗೊಂಡಿವೆ.

ಆಕಾಶದಲ್ಲಿ ತೇಲಾಡುತ್ತಿರುವ ರಕ್ತವರ್ಣದ ಚಂದಿರನು ಪುಟ್ಟ ಮಗುವಿಗೆ ತಿಂಗಳ್ ಮಾವನಾಗಿ ಪರಿಚಯವಾಗಿದ್ದೇ ತಾಯಿಯ ಮೂಲಕ. ಹಾಗಾಗಿ ತಿಂಗಳ್ ಮಾವ ಮಗುವಿಗೆ ಚಿನ್ನದುರಿಯಾಗಿ, ಕೆಂಡಗೆಂಪಾಗಿ,

ಭೂಮಿಯನ್ನು ಬೆರಗು ಮಾಡಿದ ವಿಸ್ಮಯ ವಿಶ್ವವಾಗಿ, ಸೌಂದರ್ಯದ ಅಮೃತಧಾರೆಯಾಗಿ, ತನ್ನ ಮತ್ತು ತಾಯಿಯ ನಡುವಿನ ಸ್ನೇಹ ಜಾಲವಾಗಿ ತೋರುತ್ತಾನೆ.

'ತಿಂಡಿಯನು ಕೊಡು ತಾಯೆ, ಹೇಳಿದುದ ಮಾಡುವೆನು' ಎಂದು ಅಸಾಧ್ಯವಾದದನ್ನೆಲ್ಲ ಸಾಧ್ಯಮಾಡುವ ಹುನ್ನಾರದಲ್ಲಿದ್ದಾನೆ ಮಗು. ಅತಿ ಕಿರಿಯ ವಯಸ್ಸಿನಲ್ಲಿಯೇ ಈ ಪರಿಯ ಧೈರ್ಯ ಸಾಹಸಗಳು ಮೆಚ್ಚುವಂತಹವಾಗಿವೆ. ಚಂದ್ರ, ತಾರಾಸಂಕುಲ, ಮಳೆಬಿಲ್ಲು, ಕಡಲು, ಗಿರಿಗಳನ್ನು ದಾಟಿ ಏನನ್ನು ಬೇಕಾದರೂ ತಂದುಕೊಡುವೆ ಎಂದು ತನ್ನಲ್ಲಿ ತಾನೇ ಸಂಭ್ರಮಿಸುತ್ತಿದ್ದಾನೆ. ವೈಕುಂಠ ಬೇಕೇ? ಕೈಲಾಸ ಬೇಕೇ? ಎಂಬ ಪ್ರಶ್ನೆಗಳು ವೈಕುಂಠ, ಕೈಲಾಸಗಳೆಂದರೆ ಏನು ಎಂಬ ಪರಿವೆಯೇ ಇಲ್ಲದ ಬಾಲಕನ ಬಾಯಿಂದ ಹೊರಡುತ್ತಿರುವುದು ನಿಜವಾಗಿಯೂ ಸೋಜಿಗದ ಸಂಗತಿಯಾಗಿದೆ. ಮಹತ್ತಾದ ಕಾರ್ಯಗಳ ನಿಯೋಜಕನಾಗಿ ಯಾರಿಂದಲೂ ಸಾಧ್ಯವಾದದ್ದನ್ನು ನಾನು ಸಾಧ್ಯಮಾಡುವೆ ಎನ್ನುತ್ತಾ ಮುಂದಿನ ಕಾರ್ಯಕ್ಕೆ ಹಾತೊರೆಯುತ್ತಿರುವಂತೆ ಕಾಣಿಸುತ್ತಾನೆ.

'ಹಿರೇತನ', 'ಹೇರಾಸೆ', 'ಹೂವುಗಳು', 'ಆಟ ಮುಗಿಯುವ ಮುನ್ನ', 'ಸೋತೇ ನೀನ್! ಗೆದ್ದೇ ನಾನ್!', 'ಮಲ್ಲಿಗೆ ಹೂಗಳು' - ಹೀಗೆ ಇನ್ನೂ ಅನೇಕ ಕವನಗಳಲ್ಲಿ ತಾಯಿಯ ನೆರಳು ಇದ್ದೇ ಇದೆ. ಆ ಅಪ್ತತೆಯ ನೆರಳಲ್ಲಿ ಬೆಳೆಯುವ ಮಗು ಪ್ರಕೃತಿ ಪ್ರಪಂಚದಲ್ಲಿ ತನಗಾಗುವ ಅನುಭವಗಳನ್ನೆಲ್ಲ ತಾಯಿಯೊಂದಿಗೆ ಹಂಚಿಕೊಳ್ಳುತ್ತಿದ್ದಾನೆ. ತನಗೆ ತಿಳಿಯದೆ ಇರುವ ವಿಚಾರವನ್ನು ಕುರಿತಂತೆ ತಾಯಿಯನ್ನು ಪ್ರಶ್ನಿಸುತ್ತಾನೆ. ಹೀಗೆ ತಾಯಿ ಮತ್ತು ಮಕ್ಕಳ ನಡುವಿನ ಆಪ್ತಬಂಧ ಬಿಡಿಸಲಾರದ ಅನಂತ, ಅನನ್ಯ ಸ್ನೇಹ ಬಂಧವಾಗಿದೆ.

### ೧. ದೇಶ ಮತ್ತು ಭಾಷಾಭಿಮಾನ

ಪ್ರತಿಯೊಬ್ಬನಲ್ಲಿಯೂ ದೇಶ ಮತ್ತು ಭಾಷಾಭಿಮಾನಗಳು ಮುಖ್ಯ ಮೌಲ್ಯವಾಗಿ ಬೆಳೆಯಬೇಕೆಂಬುದು ಕವಿಯ ಮಹದಾಸೆ. ಶಿಶುತನದಲ್ಲಿಯೇ ಮಕ್ಕಳಲ್ಲಿ ಅಂತಹ ಪ್ರಜ್ಞೆಯನ್ನು ಎಚ್ಚರಿಸುವ ಕೆಲಸವನ್ನು 'ಏಳಿರೈ ಬಾಲರೇ', 'ಕನ್ನಡ', 'ಎದ್ದೇಳು' ಅಂಥ ಕವಿತೆಗಳಲ್ಲಿ ಮಾಡಿದ್ದಾರೆ. ಭಾರತವು ಪರಕೀಯರ ದಾಸ್ಯಕ್ಕೆ ಒಳಗಾದ ಸಂದರ್ಭದಲ್ಲಿ ರಚಿತಗೊಂಡ 'ಏಳಿರೈ ಬಾಲರೇ' ಕವನದಲ್ಲಿ ದೇಶಸೇವೆಗಾಗಿ ಮಕ್ಕಳನ್ನು ಸನ್ನದ್ದುಗೊಳಿಸುತ್ತಿದ್ದಾರೆ. ಪರಕೀಯರ ದಾಸ್ಯಕ್ಕೆ ಒಳಗಾಗಿ ಪದತಲದೊಳು ಬಿದ್ದು ರೋದನ ಗೈಯುತ್ತಿರುವ ತಾಯ ಚಿತ್ರವನ್ನು ಮಕ್ಕಳ ಮುಂದಿಡುವುದರ ಮೂಲಕ, ಅಂಥ ದಾಸ್ಯದಿಂದ ತಾಯನ್ನು ಬಿಡುಗಡೆಗೊಳಿಸಲು ಎಚ್ಚರಿಸುತ್ತಿದ್ದಾರೆ. ಜಡತನವನ್ನು ನೀಗಿಸಿ ಧೀರತನವನ್ನು ಎಚ್ಚರಿಸುವ ಪ್ರಕ್ರಿಯೆ ಈ ಕವನದ ಮುಖ್ಯ ನೆಲೆಯಾಗಿದೆ. ಅಂಥ ಧೈರ್ಯ, ಸಾಹಸಗಳನ್ನು ಹುರಿದುಂಬಿಸುವ ಕೆಲಸ 'ಎದ್ದೇಳು' ಕವನದಲ್ಲಿಯೂ ಮುಂದುವರೆದಿದೆ.

ಭಯರಹಿತ ನೀನು,
ಲಯರಹಿತ ನೀನು!
ಬದ್ಧಾತ್ಮನಲ್ಲ,
ಶುದ್ಧಾತ್ಮ ನೀನು![೩]

ಇಂಥ ಧೈರ್ಯ, ಸಾಹಸಗಳ ಮೌಲ್ಯಗಳು ಮಕ್ಕಳಲ್ಲಿ ನೆಲೆಗೊಳ್ಳಬೇಕಾದ ಅನಿವಾರ್ಯತೆಯನ್ನು ಕುವೆಂಪು ಅವರು ಇಂಥ ಕವಿತೆಗಳಲ್ಲಿ ಮುಖ್ಯ ನೆಲೆಯಾಗಿ ಧ್ಯಾನಿಸುತ್ತಾರೆ.

ದೇಶಾಭಿಮಾನದಂತೆಯೇ ಭಾಷಾಭಿಮಾನವು ಬಹುದೊಡ್ಡ ಮೌಲ್ಯವೆಂಬುದು ಕುವೆಂಪು ಅವರ ದೃಢವಾದ ನಿಲುವು. ಕನ್ನಡ ನಾಡು, ನುಡಿ, ಸಂಸ್ಕೃತಿ, ಸಾಹಿತ್ಯಗಳ ಮಹತ್ವ, ಅವುಗಳ ರಕ್ಷಣೆ, ಪಾಲನೆ, ಪೋಷಣೆಗಳನ್ನು ಕುರಿತಂತೆ ಕುವೆಂಪು ಅವರು ನಿರಂತರವಾಗಿ ಚಿಂತಿಸಿದ್ದಾರೆ. ಈ ಚಿಂತನೆ ಇವರ ಸಾಹಿತ್ಯದಲ್ಲಿ ಮತ್ತೆ ಮತ್ತೆ ಎದುರಾಗುತ್ತದೆ. ಕನ್ನಡದ ಬಗೆಗಿನ ಅಸಡ್ಡೆ, ಕೀಳರಿಮೆ ಪರಕೀಯ ಭಾಷೆಗಳ ಮೇಲಾಟದ ಸಂದರ್ಭದಲ್ಲಿ ತಾಯ್ನುಡಿಯ ಶಕ್ತಿ ಮತ್ತು ಮಹತ್ವವನ್ನು ಈ ಕವನದಲ್ಲಿ ಎತ್ತಿ ಹಿಡಿದಿದ್ದಾರೆ. ವಸಾಹತುಶಾಹಿ ಭಾಷೆಯ ಅಕ್ರಮಣಶಾಹಿ ಶಕ್ತಿಯೊಂದಿಗೆ ಕನ್ನಡ ಭಾಷೆಯ ಶಕ್ತಿಯನ್ನು ಮುಖಾಮುಖಿಯಾಗಿರಿಸಿರುವುದು ಈ ಕವನದ ವೈಶಿಷ್ಟ್ಯವಾಗಿದೆ. ಕನ್ನಡವೆಂಬ ಶಬ್ದವನ್ನು ಕೇಳಿದೊಡನೆಯೇ ಈ ಕವಿತೆಯ ನಾಯಕನ ಪಂಚೇಂದ್ರಿಯಗಳು ಚೈತನ್ಯಗೊಳ್ಳುವ ಪ್ರಕ್ರಿಯೆಯನ್ನು ಈ ಕವನದಲ್ಲಿ ಕಾಣಬಹುದಾಗಿದೆ.



**ಕನ್ನಡದಲ್ಲಿಯೆ ಬಿನ್ನಹಗೈದೊಡೆ**
**ಹರಿವರಗಳ ಮಳೆ ಕರೆಯುವನು!**
**ಹರ ಮುರಿಯದೆ ತಾ ಪೊರೆಯುವನು!**
**ಬಾಳುವುದೇತಕೆ? ನುಡಿ, ಎಲೆ ಜೀವ :**
**ಸಿರಿಗನ್ನಡದಲಿ ಕವಿತೆಯ ಹಾಡೆ!**
**ಸಿರಿಗನ್ನಡದೇಳಿಗೆಯನು ನೋಡೆ!**
**ಕನ್ನಡ ತಾಯಿಯ ಸೇವೆಯ ಮಾಡೆ !**[೪]



ವೇದೋಪನಿಷತ್ತುಗಳ ಭಾಷೆಯಾದ ಸಂಸ್ಕೃತದೊಂದಿಗಿನ ಸಂಘರ್ಷದ ನೆಲೆಯೊಂದು ಈ ಮೇಲಿನ ಉಲ್ಲೇಖದಲ್ಲಿ ಪ್ರಕಟಗೊಳ್ಳುವುದನ್ನು ಕಾಣಬಹುದು. ಕನ್ನಡವೇ ದೈವಭಾಷೆಯಾಗಿಯೂ ಆ ಭಾಷೆಗೆ ದೈವವನ್ನು ಬಿನ್ನಹಗೈಯುವ ಶಕ್ತಿಯಿದೆ ಎಂಬ ವಿಚಾರವನ್ನು ಇಲ್ಲಿ ಕಾಣುತ್ತೇವೆ. ಬಾಳುವುದೇತಕೆ? ಎಂಬ ಪ್ರಶ್ನೆಯೊಂದಿಗೆ ಕನ್ನಡ ತಾಯಿಯ ಸೇವೆ ಮತ್ತು ಕನ್ನಡದ ಏಳಿಗೆಯನ್ನು ಕಾಣಲೆಂಬ ಮೌಲ್ಯವನ್ನು ಈ ಕವಿತೆಯಲ್ಲಿ ಚಿತ್ರಿಸಿದ್ದಾರೆ. ಕನ್ನಡವೇ ಕಾವ್ಯಕ್ಕೆ ವಸ್ತುವಾಗಬೇಕು, ಸರ್ವಕಾಲವು ಕನ್ನಡದ ಏಳಿಗೆಗಾಗಿ ಶ್ರಮಿಸಬೇಕು. ಸದಾ ಕನ್ನಡ ತಾಯಿಯ ಸೇವೆಯಲ್ಲಿ ನಿರತರಾಗಿರಬೇಕು ಎಂದು ಮಹತ್ತರವಾದ ಜವಾಬ್ದಾರಿಯನ್ನು ಮುಂದಿಡುತ್ತಿದ್ದಾರೆ. ಈ ಜವಾಬ್ದಾರಿಯನ್ನು ಮುಗ್ಧ ಚೇತನಗಳಿಗೆ ಮಾತ್ರ ಸೀಮಿತಗೊಳಿಸದೆ "ಹೇ ರಾಜಕಾರಣಿ, ಹೇ ಮಂತ್ರಿವರೇಣ್ಯ, ಹೇ ಅಧಿಕಾರಿ ಸರ್ವೋತ್ತಮ, ಹೇ ವಣಿಗ್ವರ, ಹೇ ಶ್ರಮಜೀವಿ, ಹೇ ಅಧ್ಯಾಪಕ ಮಹಾಶಯ, ಓ ನೇಗಿಲಯೋಗಿ, ನೀನು ಯಾರೆ ಆಗಿರು, ಎಲ್ಲಿಯೆ ಇರು, ಕನ್ನಡವನ್ನು ಕೈ ಬಿಡದಿರು"[೫] ಎಂದು ಮೊರೆಯಿಡುತ್ತಿದ್ದಾರೆ. ಅಂತೆಯೇ ಕನ್ನಡ ಭಾಷೆ ಮತ್ತು ಸಂಸ್ಕೃತಿಯನ್ನು ಅರಾಧಿಸುವುದರಿಂದ ಲಭಿಸುವ ಸುಖಗಳು ಯಾವ ಪ್ರಮಾಣದವು ಎಂಬುದನ್ನು 'ಕನ್ನಡಕ್ಕಾಗಿ ಕೈಯೆತ್ತು : ನಿನ್ನ ಕೈ ಕಲ್ಪವೃಕ್ಷವಾಗುತ್ತದೆ! ಕನ್ನಡಕ್ಕಾಗಿ ಕೊರಳೆತ್ತು; ಅಲ್ಲಿ ಪಾಂಚಜನ್ಯ ಮೂಡುತ್ತದೆ! ಕನ್ನಡಕ್ಕಾಗಿ ಕಿರುಬೆರಳೆತ್ತಿದ್ದರೂ ಸಾಕು ಇಂದು ಅದೆ ಗೋವರ್ಧನ ಗಿರಿಧಾರಿಯಾಗುತ್ತದೆ'[೬] ಎಂದು ಸಾಕಷ್ಟು ಫಲಗಳನ್ನು ಒಮ್ಮೆಲೆ ಹೊರಗೆಡಹುತ್ತಿದ್ದಾರೆ ಇದು ಕವಿಯ ಮನದಾಳದ ಅನುಭವದ ಅಭಿವ್ಯಕ್ತಿಯಾಗಿದೆ.

## ೨. ಮಕ್ಕಳು, ಸೃಷ್ಟಿಕ್ರಿಯೆ ಮತ್ತು ಪರಿಸರ

ಹಕ್ಕಿ, ಹೂವು, ಮಕ್ಕಳು
ಇರದೆ ಇದ್ದರೆ
ಆಗುತ್ತಿತ್ತು ನಮ್ಮ ಪೃಥಿವಿ
ಬರಡು ಮರುಧರೆ[೭]

ಮಂತ್ರಾಕ್ಷತೆಯಲ್ಲಿ ಬರುವ ಈ ಪುಟ್ಟ ಕವನ ಪರಿಸರ ವ್ಯಾಖ್ಯೆಯಂತಿದೆ. ನಿಸರ್ಗ ಮತ್ತು ಮನುಷ್ಯನ ಅಭಿನ್ನತೆಯನ್ನು ಈ ಕಿರುಗವನ ಪ್ರಕಟಿಸುತ್ತದೆ. ಆತ್ಮ ಮತ್ತು ಒಡಲಲ್ಲಿ ಹಸಿರನ್ನೇ ಧ್ಯಾನಿಸಿದ ಕವಿ ತಾನಳಿದ ಮೇಲೆ ಬಯಸಿದ್ದು ಇಂಥ ಪ್ರಶಾಂತ ಪರಿಸರವನ್ನು, ಇಂಥ ಪರಿಸರ ಸ್ವರ್ಗವನ್ನು ಒಳಗೊಂಡಿದೆ. ಹಾಗಾಗಿ ಕವಿ ತಮ್ಮ 'ನನ್ನ ಬಯಕೆ' ಕವನದಲ್ಲಿ ಸಗ್ಗವಿವನೊಳಗೊಂಡಿರಲು ಸಗ್ಗವೆನಗಿರಲಿ; ನರಕವಿವನೊಳಗೊಂಡಿರಲು ನರಕವಿರಲಿ! ಎಂದು ತಮ್ಮ ಪರಿಸರ ಪ್ರಜ್ಞೆಯನ್ನು ಮೆರೆದಿದ್ದಾರೆ.

ಪರಿಸರವನ್ನು ಕುರಿತ ಚಿಂತನೆ ಆದಿ ಪರಿಸರ ಚಿಂತಕನಾದ ಬುದ್ಧನ ಕಾಲದಿಂದಲೇ ಪ್ರಾರಂಭವಾಗುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಪ್ರಕೃತಿ ಪರಿಕಲ್ಪನೆಯ ಚರ್ಚೆ ಅನೇಕ ನೆಲೆಗಳಲ್ಲಿ ನಡೆಯುತ್ತಿದೆ. ಪರಿಸರ ಎಂದರೇನು? ಎಂಬ ಪ್ರಶ್ನೆಯೊಂದಿಗೆ ಆರಂಭವಾದ ಚಿಂತನೆ ಇಂದು ಅಸಂಖ್ಯ ರೂಪ, ಆಕಾರಗಳನ್ನು ಪಡೆದುಕೊಂಡಿದೆ. ಹೊಸತೊಂದು ಜ್ಞಾನಶಾಖೆಯಾಗಿಯೇ ಬದಲಾಗಿದೆ. ಹಾಗಾಗಿ ಎಲ್ಲಾ ಸಂದರ್ಭ ಸನ್ನಿವೇಶಗಳಲ್ಲಿ ಪರಿಸರವನ್ನು ಯಾವ ನಿರ್ದಿಷ್ಟ ಅರ್ಥದಲ್ಲಿ ವ್ಯಾಖ್ಯಾನಿಸುತ್ತಾರೆ ಎಂದು ತಿಳಿಯುವುದು ಸೂಕ್ತವಾಗಿದೆ. ಒಟ್ಟಾರೆಯಾಗಿ ಏಕಾಲಜಿಯೆನ್ನುವುದು ಪ್ರಾಕೃತಿಕ ವ್ಯಾಪಾರಗಳು ನಿರಂತರವಾಗಿ ನಡೆಯುವ ಪ್ರಕ್ರಿಯೆಯನ್ನು ವಿವರಿಸುವುದಾಗಿದೆ.

ಜಾಗತಿಕ ಮಟ್ಟದಲ್ಲಿ ಪರಿಸರ ಕಾಳಜಿಗಳು ಒಂದು ಅಧ್ಯಯನ ಶಿಸ್ತಾಗಿ ರೂಪುಗೊಳ್ಳುವುದಕ್ಕೂ ಮೊದಲು ಪರಿಸರ ಚಿಂತನೆ ಕನ್ನಡ ಸಾಹಿತ್ಯದ ಕೇಂದ್ರ ಆಯಾಮವಾಗಿ ಅಭಿವ್ಯಕ್ತಿಯ ವಸ್ತುವಾಗಿತ್ತು. ನವೋದಯ ಮತ್ತು ಆನಂತರದ ಸಾಹಿತ್ಯವನ್ನು ನೋಡಿದಾಗ ಇದು ನಮ್ಮ ಗಮನಕ್ಕೆ ಬರುತ್ತದೆ. ಆದರೂ ಪರಿಸರವು ಮುಖ್ಯ ಸಮಸ್ಯೆಯಾಗಿ ಇಂದು ಕಾಣುತ್ತಿರುವಂತೆ ಮತ್ತೆಂದೂ ಕಾಣಿಸಿರಲಿಲ್ಲವೆಂಬುದನ್ನು ಚರಿತ್ರೆ ತಿಳಿಸುತ್ತದೆ. ಆದ್ದರಿಂದ ಪರಿಸರ ಚಿಂತನೆ ಈ ಹೊತ್ತು ಜಗತ್ತಿನ ಅಧ್ಯಯನದ ಪ್ರಮುಖ ಶಾಖೆಯಾಗಿ ಬೆಳೆಯುತ್ತಿದೆ. ಕನ್ನಡ ಪರಿಸರದಲ್ಲಿಯೂ ಸ್ಥಳೀಯ ಸಂವೇದನೆಗಳು ಚಿಂತಿಸಿದ ಪರಿಸರ ಚಿಂತನೆಯ ಮಾದರಿಗಳು, ಆಶಯಗಳು, ಧೋರಣೆಗಳು ಅಧ್ಯಯನಕ್ಕೆ ಮುಖ್ಯವೆನಿಸುತ್ತವೆ. ಕನ್ನಡ ಭಾಷೆಯಂತೆಯೇ ಇನ್ನುಳಿದ ಎಲ್ಲಾ ಭಾಷೆಯ ಸಾಹಿತ್ಯ ಕೃತಿಗಳಲ್ಲಿ ಪ್ರಕೃತಿ ವಿಶಿಷ್ಟವಾದ ಹಾಗೂ ಅನನ್ಯವಾದ ಸ್ಥಾನವನ್ನು ಗಳಿಸಿಕೊಂಡಿದೆ.

ಪಾಶ್ಚಾತ್ಯ ರೊಮ್ಯಾಂಟಿಕ್‌ರಿಂದ ಬೆಳೆದು ಪಕ್ವಗೊಂಡ ಪರಿಸರ ಪರಿಕಲ್ಪನೆ ಕನ್ನಡದ ಸಂದರ್ಭದಲ್ಲಿ ಬಗೆಬಗೆಯ ಆಯಾಮಗಳನ್ನು ಪಡೆದುಕೊಂಡಿತು. ಹಾಗಾಗಿ ಕುವೆಂಪು ಅವರ ಎಲ್ಲಾ ಕೃತಿಗಳು ಪ್ರಕೃತಿ ಕೇಂದ್ರಿತವಾಗಿವೆ. ಕಾವ್ಯದ ವಸ್ತುವಾಗಿ, ಬದುಕಿನ ಭಾಗವಾಗಿ, ದೈವದ ಪ್ರತೀಕವಾಗಿ, ಪಾತ್ರಗಳ ಒಡನಾಡಿಯಾಗಿ, ನೆಮ್ಮದಿಯ ತಾಣವಾಗಿ, ಪರಿಸರ ವ್ಯಾಖ್ಯೆಯಾಗಿ, ಆಶ್ರಯ ನೆಲೆಯಾಗಿ ಹಾಗೂ ಸ್ನೇಹ ಸಂಬಂಧಗಳನ್ನು ಬೆಸೆಯುವ ಜಾಲವಾಗಿಯೂ ಕಾರ್ಯ ನಿರ್ವಹಿಸಿದೆ. ಹೀಗೆ ಪರಿಸರವನ್ನು ಒಟ್ಟಾಗಿ ಅಧ್ಯಯನ ಮಾಡುವ ವಿಧಾನವನ್ನು ಪೂರ್ಣಚಂದ್ರ ತೇಜಸ್ವಿಯವರು

ಸಂಶ್ಲೇಷಣಾ ಅಧ್ಯಯನ ವಿಧಾನವೆಂದು ಕರೆಯುತ್ತಾರೆ. ಪ್ರಸ್ತುತ ಸಂದರ್ಭದಲ್ಲಿ ಇಂಥ ಅಧ್ಯಯನಗಳಿಂದ ಹೆಚ್ಚು ಲಾಭವಿದೆಯೆಂದು ಗುರುತಿಸಿದ್ದಾರೆ.

ನವೋದಯ ಸಾಹಿತ್ಯದ ಒಲವು ಸದಾ ಹಸಿರಿನೆಡೆಗೆ ಚಲಿಸುತ್ತದೆ. ವರ್ಡ್ಸ್‌ವರ್ತ್, ರಸ್ಕಿನ್, ಥೋರೊ, ಟಾಲ್‌ಸ್ಟಾಯ್, ಗಾಂಧಿ ಅವರಂತೆಯೇ ಪ್ರಕೃತಿ ಪ್ರತಿಭೆಯಾಗಿರುವ ಕುವೆಂಪು ಮಾನವ ಸಮುದಾಯ ತನ್ನ ಸುತ್ತಣ ಪರಿಸರದೊಂದಿಗೆ ಉಳಿಸಿಕೊಂಡಿರುವ ಸ್ನೇಹ, ಸಂಬಂಧಗಳನ್ನು ಮುಖ್ಯ ಭಿತ್ತಿಗೆ ತರುತ್ತಾರೆ. ಮಾನವನ ಸ್ನೇಹ, ಪ್ರೀತಿಗಳು ನಿತ್ಯ ನಿರಂತರವಾಗಿ ಬೆಳೆದಿರುವುದನ್ನು ವಿಶ್ಲೇಷಿಸಲು ಪ್ರಯತ್ನಿಸಿದ್ದಾರೆ. ಕುವೆಂಪು ಅವರು ಪ್ರಕೃತಿ ಆರಾಧಕರಾಗಿ ತಮ್ಮೆಲ್ಲಾ ಕೃತಿಗಳಲ್ಲಿ ಸಂಪೂರ್ಣವಾಗಿ ಕಟ್ಟಿದ್ದು ಪರಿಸರ ತಾತ್ತ್ವಿಕತೆಯನ್ನು. ಇಂಥ ತಾತ್ವಿಕತೆ ಕಾಲಾನುಕ್ರಮವಾಗಿ ಹಾಗೂ ಸಂದರ್ಭಾನುಸಾರಿಯಾಗಿ ಹೊಸ ಅನ್ವೇಷಣೆಯತ್ತ ಮುಖ ಮಾಡುತ್ತದೆ. ಆದ್ದರಿಂದಲೇ ಒಟ್ಟು ಕೃತಿ ಸಮೂಹವನ್ನು 'ಹಸಿರು ಕಥನ'ಗಳೆಂದು ಕರೆಯಬಹುದು.

'ನನ್ನ ಮನೆ', 'ಮೇಘಪುರ', 'ಮರಿ ವಿಜ್ಞಾನಿ' ಕವನ ಸಂಕಲನಗಳಲ್ಲಿ ಮಕ್ಕಳು ಪರಿಸರದ ಬಗೆಗಿನ ಅನೇಕ ವಿಸ್ಮಯಗಳನ್ನು ಪ್ರಶ್ನಿಸುತ್ತಾರೆ. ಮೋಡ, ಕಾಮನಬಿಲ್ಲು, ಹೂಗಳು, ಚಂದ್ರ, ಹಕ್ಕಿ, ಸೂರ್ಯ, ನಕ್ಷತ್ರ, ನದಿ, ಹೊಂಬಿಸಿಲು ಮೊದಲಾದ ವಿಷಯಗಳನ್ನೊಳಗೊಂಡ ಅನೇಕ ಕವನಗಳು ಮುಗ್ಧ ಮನಸ್ಸುಗಳ ಪ್ರಶ್ನೆಗಳಿಗೆ ಉತ್ತರವನ್ನೀಯುತ್ತವೆ. ಮಕ್ಕಳ ಕಲ್ಪನಾಲೋಕದಲ್ಲಿ ವಿಹರಿಸುತ್ತವೆ. 'ಪೊದೆಯ ಹಕ್ಕಿ, ಎದೆಯ ಹಕ್ಕಿ', 'ಬಣ್ಣದ ಚುಕ್ಕಿ', 'ಸಂಜೆಯ ರವಿ', 'ಹೂವುಗಳು', 'ಮಲ್ಲಿಗೆ ಹೂಗಳು', 'ತೊರೆಯ ಬಳಿ', 'ಹಕ್ಕಿಗಳು' ಮೊದಲಾದ ಕವನಗಳಲ್ಲಿ ಮಗುವೊಂದು ಪ್ರಕೃತಿಯೊಂದಿಗೆ ಉಳಿಸಿಕೊಂಡಿರುವ ಆತ್ಮೀಯ ಸ್ನೇಹವನ್ನು ಕಾಣಬಹುದು. ಇಂಥ ಆತ್ಮೀಯತೆ - ಆಪ್ತತೆ ಪರಿಸರ ಪರವಾಗಲು ಸಹಕಾರಿಯಾಗುತ್ತದೆ ಎಂಬ ಸತ್ಯವನ್ನು ಅರಿತು ಇಂಥ ವಸ್ತುಗಳನ್ನು ಮಕ್ಕಳ ಕೃತಿಗಳಲ್ಲಿ ಬಳಸಿದ್ದಾರೆ.

ನಿಜವಾದ ಶಿಕ್ಷಣ ಪ್ರಕೃತಿಯಿಂದಲೇ ದೊರೆಯುತ್ತದೆಂಬುದು ಇಲ್ಲಿನ ಅನೇಕ ಕವನಗಳಲ್ಲಿ ಧ್ವನಿತವಾಗುವ ಮುಖ್ಯ ಸಂಗತಿ. ಬಾಲ್ಯದಲ್ಲಿನ ಪಂಚೇಂದ್ರಿಯಗಳು ಚಟುವಟಿಕೆವುಳ್ಳವುಗಳು, ಉತ್ಸಾಹವುಳ್ಳವು ಆಗಿರುವುದರಿಂದ ನಮ್ಮ ಮನಸ್ಸು ಮತ್ತು ಶರೀರದ ಪೂರ್ಣ ಸಹಾಯದಿಂದ ನಾವು ಶಿಕ್ಷಣವನ್ನು ಹೊಂದುತ್ತೇವೆಂಬ ವಿಚಾರವು ಇಲ್ಲಿ ಕಾಣಿಸುತ್ತದೆ. ತಾಯಿಯಾದ ಪ್ರಕೃತಿಯಿಂದ ಪ್ರತ್ಯಕ್ಷವಾಗಿ ಜ್ಞಾನವನ್ನು ಸಂಪಾದಿಸಲು ಯಾವಾಗಲು ಪರಿಶುದ್ಧವಾದ ಮತ್ತು ಸೂಕ್ಷ್ಮವಾದ ಬುದ್ಧಿಗೆ ನಿರ್ಬಂಧಗಳನ್ನು ಹೇರುವ ಮನೋಧರ್ಮಗಳಿಗೆ ಮಾರ್ಗದರ್ಶಿಯಂತಿವೆ. ಹೀಗೆ ಪರಿಸರ ಕೇಂದ್ರಿತ ರಚನೆಗಳ ಮೂಲಕ ಕುವೆಂಪು ಅವರು ಮಕ್ಕಳಲ್ಲಿ ಪರಿಸರ, ಆಧ್ಯಾತ್ಮ ಮತ್ತು ವೈಚಾರಿಕತೆಗಳನ್ನು ಸಂಲಗ್ನಗೊಳಿಸಿದ್ದಾರೆ.

## ೨. ವಿಜ್ಞಾನ ಮತ್ತು ವೈಜ್ಞಾನಿಕತೆ

'ಮೂರ್ತಿಯ ವಿಜ್ಞಾನ' ಕವನ ಮುಗ್ಧ ಬಾಲಕ ಪ್ರಕೃತಿಯನ್ನು ಪರಿಚಯಿಸಿಕೊಳ್ಳುವ ಆ ಮೂಲಕ ತಾನೇ ಉತ್ತರ ಕಂಡುಕೊಳ್ಳುವುದಾಗಿದೆ. ಮೂರ್ತಿ ಅತಿ ಕಿರಿಯ ವಯಸ್ಸಿನಲ್ಲಿಯೇ ಗುಡುಗು, ಮಳೆ, ಮಿಂಚು, ಮುಗಿಲುಗಳನ್ನು ಪರಿಚಯ ಮಾಡಿಕೊಳ್ಳಲು ಮಾಡುತ್ತಿರುವ ಪ್ರಯತ್ನ ನಿಜವಾಗಿಯೂ ಆಶ್ಚರ್ಯಕರವಾದದ್ದಾಗಿದೆ. ಮೂರ್ತಿಯ ಮುಗ್ಧ ಪ್ರಶ್ನೆ ಮತ್ತು ಅನುಮಾನವೇ ಇಲ್ಲಿ ಕವನವಾಗಿ ರೂಪುಗೊಂಡಿದೆ. 'ಅಮ್ಮನ ಮೂರ್ತಿ', ಮೂರ್ತಿಯ

ಚಂದ್ರ, 'ಮೂರ್ತಿಯ ವಿಜ್ಞಾನ' - ಹೀಗೆ ಅನೇಕ ಕವನಗಳಲ್ಲಿ ಮೂರ್ತಿಯನ್ನು ಕುರಿತಂತೆ ಸ್ವತಃ ಕುವೆಂಪು ಅವರು "ಇಲ್ಲಿ ಮತ್ತೆ ಮತ್ತೆ ಬರುವ ಮಗುವಿನ ಹೆಸರು 'ಮೂರ್ತಿ' ನಾ ಕಸ್ತೂರಿಯವರ ಮೊದಲನೆಯ ಮಗುವಾಗಿದ್ದು, ಅವನು ಆಶ್ರಮದ ಪಕ್ಕದಲ್ಲಿಯೇ ಇದ್ದ ಅವರ ಮನೆಯಿಂದ ತನ್ನ ತಂದೆಯೊಡನೆ ಆಶ್ರಮಕ್ಕೆ ಬಂದು ತೊದಲು ಮಾತಿನಿಂದಲೂ ಮಕ್ಕಳಾಟದಿಂದಲೂ ಆಶ್ರಮದ ಆಧ್ಯಾತ್ಮಿಕ ಭಾರದ ಗುರುತ್ವಕ್ಕೆ ತುಸು ಲೌಕಿಕ ವಿನೋದದ ಮತ್ತು ಲಘುತ್ವದ ಹರ್ಷವನ್ನುಂಟು ಮಾಡುತ್ತಿದ್ದನು"[೮] ಎಂದು ತಮ್ಮ 'ನೆನಪಿನ ದೋಣಿಯಲ್ಲಿ' ದಾಖಲಿಸುತ್ತಾರೆ.

ಮೂರ್ತಿ ತಾನು ಎಂದೂ ದರ್ಶಿಸದ ಸ್ಥಳವನ್ನು ಹಾಗೂ ಗುಡುಗು, ಮಳೆ, ಮಿಂಚು, ಮುಗಿಲುಗಳನ್ನು ದೇವರ ಲೋಕವಾಗಿ, ಚಿನ್ನದ ಉಕ್ಕಿನ ನೆಲವಾಗಿ, ಉಕ್ಕಿನ ಚೆಂಡಾಗಿ ಗ್ರಹಿಸಿಕೊಳ್ಳುತ್ತಿದ್ದಾನೆ. ಈ ಗ್ರಹಿಕೆಯಲ್ಲಿಯೇ ಬಾಲವಿಜ್ಞಾನ ರೂಪುಗೊಳ್ಳುತ್ತಿದೆ. ಗುಡುಗು, ಮಳೆ, ಮಿಂಚುಗಳು ರೂಪುಗೊಳ್ಳುವುದಕ್ಕೆ ನಿಖರವಾದ ವೈಜ್ಞಾನಿಕ ಕಾರಣಗಳು ತಿಳಿಯದೆ ಹೋದರು ಮೂರ್ತಿ ತನ್ನ ಅಲ್ಪ ಜ್ಞಾನದಿಂದ, ವೈಚಾರಿಕ ಪ್ರಖರತೆಯಿಂದ ಮಳೆ, ಗುಡುಗು, ಮಿಂಚು, ಮುಗಿಲುಗಳಿಗೆ ಉತ್ತರವನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಿದ್ದಾನೆ. ದೇವರ ಬಾಲಕರು ಉಕ್ಕಿನ ಚೆಂಡಾಡುವಾಗ ಚೆಂಡು ಕೆಳಗೆ ಬಿದ್ದರೆ ಅದು ಗುಡುಗಾಗಿ ಕೇಳಿಸುತ್ತದೆ. ಅದರಿಂದೆದ್ದ ಕಿಡಿ ಮಿಂಚಾಗಿ ಕಾಣಿಸುತ್ತದೆ. ಅಲ್ಲಿನ ಬಾಲಕರು ಆಡಿ, ಬೆವರಿ ಬಸವಳಿದು ಸುರಿಸಿದ ಬೆವರು ಮಳೆಯಾಗುತ್ತದೆ. ಅಂತೆಯೇ ಉಕ್ಕಿನ ಧೂಳು ಭೂಮಿ ಆಕಾಶವನ್ನು ವ್ಯಾಪಿಸಿದಾಗ ಕಾರ್ಮುಗಿಲಾಗುತ್ತದೆ ಎಂದು ಮೂರ್ತಿ ತನ್ನ ತಾಯಿಗೆ ಪರಿಚಯಿಸುತ್ತಲೇ ಹುಡುಗರ ಆಟ ಸಾಮಾನ್ಯವಾದುದಲ್ಲ ಎಂಬುದನ್ನು ಸಾರುತ್ತಿದ್ದಾನೆ. ಇವರ ಆಟದಿಂದ ಬರಗಾಲ ಮತ್ತು ಕ್ಷಾಮ ದೂರವಾಗುತ್ತದೆ ಎನ್ನುತ್ತಿದ್ದಾನೆ.

ಹೀಗೆ ಮೂರ್ತಿಯೇ ರೂಪಿಸಿಕೊಂಡ ಪ್ರಶ್ನೆಗಳು ಅಂತಿಮವಾಗಿ ಎಳೆಯ ಮಕ್ಕಳಿಗೆ ಗುಡುಗು, ಸಿಡಿಲು, ಮಿಂಚು, ಮಳೆಗಳ ಬಗ್ಗೆ ಉಪಯುಕ್ತ ಮಾಹಿತಿಯನ್ನು ಕೊಡುವುದರ ಜೊತೆಗೆ ಅವುಗಳ ಅನಿವಾರ್ಯತೆಯನ್ನು ಪ್ರಸ್ತುತಪಡಿಸುತ್ತಿವೆ.

**ಅಡಿಟಿಪ್ಪಣಿ :**


೧. ಕುವೆಂಪು, ನನ್ನ ಮನೆ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೮೮, ಪು. ೬

೨. ಅದೇ, ಪು. ೧೪

೩. ಕುವೆಂಪು, ಮೇಘಪುರ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೬೬, ಪು. ೧೬

೪. ಕುವೆಂಪು, ನನ್ನ ಮನೆ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೮೮, ಪು. ೫

೫. ಶಿವಾರೆಡ್ಡಿ ಕೆ.ಸಿ. (ಸಂ.), ಕುವೆಂಪು ಸಮಗ್ರ ಗದ್ಯ, ಸಂಪುಟ ೨, ಪ್ರಸಾರಾಂಗ, ಕ.ವಿ.ವಿ., ಹಂಪಿ, ೨೦೦೪, ಪು. ೩೪೭-೩೪೮

೬. ಅದೇ, ಪು. ೩೪೮

೭. ಶಿವಾರೆಡ್ಡಿ ಕೆ.ಸಿ. (ಸಂ.), ಕುವೆಂಪು ಸಮಗ್ರ ಕಾವ್ಯ, ಸಂಪುಟ ೨, ಪ್ರಸಾರಾಂಗ, ಕ.ವಿ.ವಿ., ಹಂಪಿ, ೨೦೦೦, ಪು. ೩೦೯.

೮. ಕುವೆಂಪು, ನೆನಪಿನ ದೋಣಿಯಲ್ಲಿ ೧, ಸಹ್ಯಾದ್ರಿ ಪ್ರಕಾಶನ, ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು, ೧೯೮೦, ಪು. ೭೧೧


* * *

# ೯. ಮೋಡಣ್ಣನ ತಮ್ಮ ಹಾಗೂ ನನ್ನ ಗೋಪಾಲ ನಾಟಕಗಳಲ್ಲಿ ಜೀವಕೇಂದ್ರಿತ ಮೌಲ್ಯಗಳ ಶೋಧ ಹಾಗೂ ಭಕ್ತಿ, ಅಧ್ಯಾತ್ಮದ ಬೆಳವಣಿಗೆಯ ಮಹತ್ವ

## ೧

ಮಗುವೊಂದು ಮುಂಗಾರಿನ ಮೋಡವನ್ನು ಅಣ್ಣನೆಂದು ಭಾವಿಸಿ ಅವನೊಂದಿಗೆ ಸಂಭಾಷಣೆ ನಡೆಸುವ ಪ್ರಕ್ರಿಯೆ ಈ ನಾಟಕದ ವಸ್ತು. ಇಲ್ಲಿನ ಮಗು ಮೋಡ, ಗಿರಿ, ಕಾಡುಗಳಂಥ ವಿಶಿಷ್ಟ ವಿಶೇಷಿಕೃತ ವ್ಯಾಪ್ತಿಯುಳ್ಳ ಪ್ರಾಕೃತಿಕ ಶಕ್ತಿಗಳೊಂದಿಗೆ ನಡೆಸುವ ಸಂವಾದ ಅನನ್ಯ ಹಾಗೂ ಆಕರ್ಷಕವಾಗಿದೆ. ಸರಳವಾದ ಭಾಷೆ, ಆ ಭಾಷೆಯ ನೃತ್ಯ ಲಯಗಳು, ಕೋಮಲವಾದ ಭಾವಗಳು ಮಕ್ಕಳ ಮನಸ್ಸನ್ನು ರಂಜಿಸುವ, ಆಕರ್ಷಿಸುವ ಶಕ್ತಿಯನ್ನು ಪಡೆದಿವೆ. 'ಮೋಡಣ್ಣನ ತಮ್ಮ' (೧೯೨೬) ನಾಟಕದಲ್ಲಿ ಕಲ್ಪನೆಯೇ ಪ್ರಧಾನ. ಆ ಮುಖೇನ ಲೇಖಕರು ಮಕ್ಕಳಲ್ಲಿ ಬಿತ್ತಬೇಕಾದ ಮೌಲ್ಯಗಳನ್ನು ಅಂತರ್ಧಾನ ಮಾಡುವುದರಲ್ಲಿಯೂ ಯಶಸ್ಸನ್ನು ಕಂಡಿದ್ದಾರೆನ್ನಬಹುದು. ಕುವೆಂಪು ಅವರೇ ಹೇಳುವಂತೆ " 'ಮೋಡಣ್ಣನ ತಮ್ಮ' ಎಂಬ ಮಕ್ಕಳ ನಾಟಕದಲ್ಲಿಯೂ ಸ್ವಾಮಿ ವಿವೇಕಾನಂದರ ಭಾಷಣಗಳ ಮತ್ತು ವೇದಾಂತದ ಪ್ರಭಾವ ಎದ್ದು ಕಾಣುತ್ತದೆ" ಎನ್ನುತ್ತಾರೆ. ಹಾಗೆಯೇ "ಆ ನಾಟಕವನ್ನು ಕಸ್ತೂರಿಯವರು ವಿವೇಕಾನಂದ ರೋವರ್ ದಳದವರ ಒಂದು ಸಮಾರಂಭದಲ್ಲೆ ಮಕ್ಕಳ ಕೈಯಿಂದಲೆ ಆಡಿಸಿ, ಅದು ತುಂಬ ಮೆಚ್ಚುಗೆ ಪಡೆದದ್ದೂ ನನಗೆ ನೆನಪಿದೆ"[೧] ಎಂದು ತಮ್ಮ ಆತ್ಮಕಥೆ ನೆನಪಿನ ದೋಣಿಯಲ್ಲಿ ದಾಖಲಿಸಿದ್ದಾರೆ.

'ಶ್ರೀ ರಾಮಾಯಣ ದರ್ಶನಂ' ಎಂಬ ಮೇರು ಕೃತಿಯಲ್ಲಿ ಪ್ರಕೃತಿ ಅಥವಾ ಪರಿಸರ ಕಾವ್ಯದ ಸಂಪೂರ್ಣ ಭಾಗವನ್ನು ವಸ್ತು ವಿಷಯಗಳಾಗಿ ಅಲಂಕರಿಸಿರುವುದು ಆ ಕಾವ್ಯದ ವಿಶೇಷತೆ. ಇಂತಹದೇ ಒಂದು ಪ್ರಯತ್ನ 'ಮೋಡಣ್ಣನ ತಮ್ಮ' ಎಂಬ ಸಣ್ಣ ನಾಟಕದಲ್ಲೂ ನಡೆದಿದೆ. ಸಣ್ಣ ಮಕ್ಕಳಲ್ಲಿ ಪರಿಸರ ಪ್ರೀತಿಯನ್ನು ಮತ್ತು ಪರಿಸರವನ್ನು ಕುರಿತು ಹೊಸ ಬಗೆಯ ಎಚ್ಚರವನ್ನು ಹುಟ್ಟಿಸುವ ಹಂಬಲ ಕವಿಯ ಅನುಭವದಾಳದಲ್ಲಿ ಮೂಡಿನಿಂತಿದೆ. ಹಾಗಾಗಿ ಪ್ರಕೃತಿ ಜಗತ್ತನ್ನು ಸೇರುವ ಹೆಬ್ಬಯಕೆಯನ್ನಿಟ್ಟುಕೊಂಡಿರುವ ಬಾಲಕನನ್ನು ನಾಟಕದ ಪ್ರಮುಖ ಪಾತ್ರವಾಗಿ ಚಿತ್ರಿಸಿದ್ದಾರೆ. ಸಾಮಾನ್ಯತೆಯನ್ನು, ಲೌಕಿಕತೆಯನ್ನು ಮತ್ತು ಅಲ್ಪತೆಯನ್ನು ಕಳಚಿಕೊಂಡಿರುವ ಶಿಶುಚೇತನ ಅಸಮಾನ್ಯತೆಯ, ಅಲೌಕಿಕತೆಯ ಮತ್ತು ಮಹತ್ತಾದ ವಿಸ್ಮಯಗಳ ಕಡೆ ಮುಖ ಮಾಡಿ ನಿಂತಿರುವುದು ಹೊಸ ಅರ್ಥಪರಂಪರೆಗಳನ್ನು ಹುಟ್ಟಿಸುವಲ್ಲಿ ಸಹಕಾರಿಯಾಗಿದೆ. ಪ್ರಸ್ತುತ ಕಾಲಮಾನದ ಕೃತಕ ಪರಿಸರ ಸ್ನೇಹಿ ವ್ಯವಸ್ಥೆಗಳನ್ನು ಪ್ರಶ್ನೆ ಮಾಡುವುದರತ್ತ ಈ ನಾಟಕ ಸಾಗಿದೆ.

ಅನಾದಿ ಕಾಲದಿಂದ ಪುರಾಣ, ಕಾವ್ಯ, ಕಥೆಗಳಿಗೆ ಪರಿಸರವೇ ವಸ್ತುವಾಗಿತ್ತು. ಇದರ ಮುಂದುವರಿದ ರೂಪವಾಗಿ ಅಥವಾ ಭಾಗವಾಗಿ ನವೋದಯ ಸಾಂಸ್ಕೃತಿಕ ಸಂದರ್ಭದ ಕಾವ್ಯದ ವಸ್ತುಗಳನ್ನು ಗುರುತಿಸಬಹುದಾಗಿದೆ. ನಿತ್ಯ ನೂತನ ಮತ್ತು ನಿತ್ಯ ನವೀನ ವಸ್ತುಗಳನ್ನು ಆಯ್ಕೆ ಮಾಡಿಕೊಳ್ಳುವ ನವೋದಯ ಪ್ರತಿಭೆಗಳು ಮಾನವ ಮತ್ತು ಪ್ರಕೃತಿಯೊಂದಿಗೆ ಇರುವ ಸ್ನೇಹ ಮತ್ತು ಆಪ್ತತೆಗಳನ್ನೂ ವಸ್ತುವಾಗಿ ಸ್ವೀಕರಿಸಿವೆ. ಇದರ ಫಲವಾಗಿ ಸಣ್ಣ ಹುಡುಗ ಮೋಡಣ್ಣನ ತಮ್ಮನಾಗಿ ರೂಪುಗೊಂಡಿದ್ದಾನೆ. ಅಣ್ಣ - ತಮ್ಮ, ಅಕ್ಕ - ತಂಗಿ, ಅಂಥ ಸ್ನೇಹ ಭಾವಗಳು ನಿರಂತರವಾಗಿರುವಂತಹವು. ಪ್ರೀತಿ - ಪ್ರೇಮಗಳಿಂದ ತುಂಬಿರುವಂತಹವು. ಹಾಗಾಗಿ ಕವಿ ಮೋಡವನ್ನು ಅಣ್ಣನಾಗಿ ಚಿತ್ರಿಸಿ, ಸಣ್ಣ ಬಾಲಕನನ್ನು ತಮ್ಮನಾಗಿ ಚಿತ್ರಿಸಿದ್ದಾರೆ. ಕವಿಯ ಕಲ್ಪನಾಲೋಕ "ಪರಿಸರ ಸಹೋದರತ್ವ"ದ ಕಡೆಗೆ ಚಲಿಸಿದೆ.

ಅಸಂಖ್ಯವಾದ ಅನುಭವ, ಆಯುಷ್ಯವಿರುವ ಮೋಡಣ್ಣ ಹುಡುಗನಿಗೆ ಅತ್ಯದ್ಭುತಗಳ ಆಗರವಾಗಿ ಕಾಣುತ್ತಿದ್ದಾನೆ. ನೀಲಾಕಾಶದಲ್ಲಿ ಒಂಟಿಯಾಗಿ ತೇಲುತ್ತಿರುವ ಮೋಡವನ್ನು ಕಂಡು ಬಾಲಕ ನನ್ನ ಜನ್ಮಕ್ಕಿಂತಲೂ ನಿನ್ನ ಜನ್ಮವೇ ಪುಣ್ಯಕರವಾದುದೆಂದು ತಿಳಿದು ಈ ಮಾತುಗಳನ್ನು ಆಡುತ್ತಿದ್ದಾನೆ.

**ಬಲು ಸಂತೋಷದಿ ತೇಲುವೆಯಣ್ಣ;**
**ಬಳಲದೆ ಆಟವನಾಡುವೆಯಣ್ಣ.**
**ಮಿಂಚಿನ ಬಳಿಯೇ ನೀನಿರುವೆ;**
**ಮಿಂಚಿನ ಬಳೆಯನೆ ಧರಿಸಿರುವೆ.**
**ಗುಡುಗಿನ ಸಂಗಡ ಆಡುವೆ ನೀನು**
**ಗುಡುಗಾಟವ ಆಡುವವೊಲು ನಾನು**
**ದೂರದ ಗಿರಿಗಳ ಏರುವೆ ನೀನು**
**ದೂರದ ಪುರಗಳ ನೋಡುವೆ ನೀನು;**[೨]

ಎಂದು ಮೋಡಣ್ಣನ ಸಾಹಸಕಾರ್ಯಗಳನ್ನು ಲೀಲಾಜಾಲವಾಗಿ ಉಸುರುತ್ತಿದ್ದಾನೆ. ಇಲ್ಲಿ ನಿರೂಪಕರು ಮನುಷ್ಯ ಮತ್ತು ಪ್ರಕೃತಿಯ ನಡುವಿನ ಅಭಿನ್ನತೆಯನ್ನು ವ್ಯಕ್ತಪಡಿಸುತ್ತಿದ್ದಾರೆ. ಅಂತೆಯೇ ಇಲ್ಲಿನ ಮಗು ಮೋಡ, ಗಿರಿ, ಕಾಡುಗಳೊಂದಿಗೆ ಸುಲಭವಾಗಿ ಮಾತಾಡಬಲ್ಲ, ಜಗಳವಾಡಬಲ್ಲ, ನಿವೇದಿಸಿಕೊಳ್ಳಬಲ್ಲ ಮತ್ತು ಅವರುಗಳ ಬೋಧನೆಯನ್ನು ಕೇಳಬಲ್ಲ. ಹುಟ್ಟಿದ ಮಗುವಿನಲ್ಲಿ ಕೃತಕ ಬದ್ಧತೆ ಬೆಳೆಯುವುದಕ್ಕೆ ಮುನ್ನ ಇರುವ ಮುಗ್ಧತೆ ಈ ಮಗುವಿನಲ್ಲಿದೆ. ಎಳೆಯ ಮಕ್ಕಳಲ್ಲಿ ಕುವೆಂಪು ಪರಿಭಾವಿಸುತ್ತಿರುವ ವಿಶ್ವಮಾನವತೆ ಇದೇ ಆಗಿದೆ.

ಮೋಡಣ್ಣನ ಸಾಹಸ ಕಾರ್ಯಗಳಲ್ಲಿ ಭಾಗಿಯಾಗಲು, ಆತನ ಜೊತೆ ಸೇರಲು ಹೆಚ್ಚು ಕಾತುರನಾಗಿದ್ದಾನೆ. ಆದರೆ ಹುಡುಗನ ಶಕ್ತಿ ಸಾಮರ್ಥ್ಯಗಳನ್ನು ಗುರುತಿಸಿಯೋ ಅಥವಾ ಮುಂದೆ ಆತನಿಂದ ಪ್ರಕೃತಿ ಜಗತ್ತಿಗೆ ಆಗುವ ಅಪಾಯವನ್ನು ತಿಳಿದೋ ಮೋಡಣ್ಣ ತಮ್ಮನನ್ನು ತನ್ನ ಬಳಿಗೆ ಕರೆದುಕೊಳ್ಳಲು ಹಿಂಜರಿಯುತ್ತಿದ್ದಾನೆ. ಅವ್ವ ಬೈವಳು ನೀ ಬರಬೇಡ ಎಂದು ತಡೆಯುತ್ತಿದ್ದಾನೆ. ಇದರಿಂದ ಬೇಸತ್ತ ಹುಡುಗ ಗಿರಿಯ ಸಹಾಯವನ್ನು ನಾನಾ ಪರಿಯಲ್ಲಿ ಬೇಡುತ್ತಾನೆ. ಸ್ನೇಹ ಸಂಬಂಧಗಳು ಇಬ್ಬರ ನಡುವೆ ನಿರಂತರವಾಗಿ ರೂಪುಗೊಂಡಿರುವ ಬಗೆಯನ್ನು ನೆನಪಿಸುತ್ತಾನೆ. ಸವಿಯಾದ ಮುಂಜಾನೆಗಳನ್ನು ಬೆಟ್ಟ ಗುಡ್ಡಗಳಲ್ಲಿ ಕಳೆದ ಪರಿಯನ್ನು ಮನವರಿಕೆ ಮಾಡಿಕೊಡುತ್ತಾನೆ. ಕೊಳಲನ್ನು ಊದಿ

ಹೃದಯಾನಂದವಾದ ಅನುಭವವನ್ನು ಅಭಿವ್ಯಕ್ತಿಸುತ್ತಿದ್ದಾನೆ. ನಮ್ಮಿಬ್ಬರ ನಡುವಿನ ನಂಟಿಗೆ ಕೊನೆಯೇ ಇಲ್ಲವೆಂದೂ ಹೇಳುತ್ತಿದ್ದಾನೆ. ಈ ನಂಟಿನ ನೆಪದಲ್ಲಿ ಗಿರಿಯಣ್ಣ ಮೋಡಣ್ಣನಿಗೆ ಹುಡುಗನ ಪರವಾಗಿ ಸಹಾಯವನ್ನು ಮಾಡಲು ಮುಂದಾಗುತ್ತಾನೆ. ಜಗತ್ತಿನ ಕೇಂದ್ರ ಬಿಂದುವಾಗಿರುವ ನೀನು, ಶರಧಿಯ ನೀರು, ಸಿಡಿಲು, ಮಿಂಚು, ರೈತರ ನಿಂದೆ ಮಾತುಗಳನ್ನು ಸಹಿಸಿಕೊಳ್ಳುವವನು ಹುಡುಗನನ್ನು ನಿನ್ನೆಡೆಗೆ ಕರೆದುಕೊಂಡು ತಾಯಿಯ ದೂರನ್ನು ಸಹಿಸಿಕೊಂಡರೆ ನಿನಗಾಗುವ ತೊಂದರೆಯಾದರೂ ಏನು? ಎಂದು ಕೇಳುತ್ತಾನೆ. ಹೀಗೆ ಗಿರಿಯಣ್ಣ ಮೋಡಣ್ಣನ ಸಾಧ್ಯಾಸಾಧ್ಯತೆಗಳನ್ನೆಲ್ಲ ವರ್ಣಿಸಿ ಸಣ್ಣ ಬಾಲಕನ ಮೇಲೆ ಕೃಪೆದೋರಲು ಪ್ರಯತ್ನಿಸುತ್ತಾನೆ. ಆದರೆ ಮೋಡಣ್ಣ ನಾಗರೀಕ ಪ್ರಜ್ಞೆ ರೂಢಿಸಿಕೊಂಡಿರುವ ಅನಾಗರೀಕ ಪ್ರವೃತ್ತಿಯಿಂದಲೋ ಏನೋ ಕೋಪಗೊಂಡಿದ್ದಾನೆ.

ಮಾನವ ಸಮುದಾಯಕ್ಕೆ ಪ್ರಕೃತಿ ಮಾತೆಯ ಒಡನಾಟ ಇತ್ತೀಚಿನದಾಗಿರದೆ ಬಹು ಹಿಂದಿನಿಂದಲೂ ರೂಢಿಯಲ್ಲಿದೆ. ಭೂಮಾತೆಯ ಗರ್ಭ ಅಥವಾ ಒಡಲೇ ಮಾನವನ ಜೀವನ ನಿರ್ವಹಣೆಗೆ ಮೂಲ. ಆದ್ದರಿಂದಲೇ ನಾಟಕಕಾರರು "ಅಂದಿನ ಗೆಳೆತನವಿನ್ನೂ ಉಂಟು. ಎಂದಿಗೂ ಹೋಗದು ಹಿಂದಿನ ನಂಟು" ಎಂಬ ಸತ್ಯಾಂಶವನ್ನು ನುಡಿದಿದ್ದಾರೆ. ಇದನ್ನು ಅಸಂಖ್ಯ ವರ್ಷಗಳ ಬೆಸುಗೆ, ಬಂಧನವೆಂದರೂ ತಪ್ಪಾಗಲಾರದು. ಇಂದು ಪ್ರಕೃತಿಯ ಸೂಕ್ಷ್ಮತೆಯನ್ನು ತಿಳಿದುಕೊಳ್ಳುವಲ್ಲಿ ಸೋತು ನಿಸರ್ಗವನ್ನು ಅತಿಲೋಭದತ್ತ ಎಳೆಯುತ್ತಿದ್ದಾರೆ. ಇದರಿಂದಾಗುವ ಮಾರಕಗಳ ಬಗ್ಗೆಯೂ ಕವಿ ಚಿಂತಿಸುತ್ತಿದ್ದಾರೆ. ಈ ಅಂಶ ನಾಟಕದಲ್ಲಿ ಕಂಡು ಕಾಣದಂತೆ ಅಂತರ್ಗತವಾಗಿದೆ. ಹೀಗಿರುವಾಗ ಗಿರಿಯಣ್ಣನ ಮಾತಿಗೆ ಪ್ರತ್ಯುತ್ತರವಾಗಿ ಮೋಡಣ್ಣ ಸಣ್ಣಬಾಲಕನ ಮಾತುಗಳನ್ನು ಆಲಿಸಿ ನೀನು ಸಣ್ಣವನಂತೆ ಮಾತನಾಡುತ್ತೀಯ ಎಂದು ಗಿರಿಯಣ್ಣನ ಪ್ರಜ್ಞೆಯನ್ನು ಎಚ್ಚರಗೊಳಿಸುತ್ತಾನೆ.

**ಹತ್ತು ಕಡಲುಗಳ ಹೊತ್ತರು ನಾನು**
**ಎತ್ತೆನು ಬಾಲಕನೋರ್ವನ, ಕೇಳು**
**ಸಿಡಿಲು ಮಿಂಚುಗಳನಾಳಲು ಬಲ್ಲೆ;**
**ಹುಡುಗರನಾಳುವುದಾದರೆ ಒಲ್ಲೆ!**
**ರೈತರ ಗುಂಪೇ ಬೈದರು ಸೈರಿಪೆ;**
**ತಾಯಿಯ ಶಾಪವ ಸೈರಿಸೆ ನಾನು**
**ಎಲೆ ಗಿರಿಯಣ್ಣಾ, ಎಲೆ ಗಿರಿಯಣ್ಣಾ,**
**ನಿನಗೇಕಣ್ಣಾ? ಸುಮ್ಮನಿರಣ್ಣಾ**[೩] ಎನ್ನುತ್ತಾನೆ.

ಮೋಡಣ್ಣನ ಈ ಮಾತುಗಳಿಂದ ಗಿರಿಯಣ್ಣ ಬೇಸರಗೊಂಡು ಹುಡುಗನತ್ತ ಅಸಹಾಯಕ ದೃಷ್ಟಿಯನ್ನು ಬೀರುತ್ತಾನೆ. ಗಿರಿಯಣ್ಣನ ಮಾತುಗಳು ಫಲಕಾರಿಯಾಗದೆ ಹುಡುಗ ಮತ್ತೊಮ್ಮೆ ಮೋಡಣ್ಣನನ್ನು ಓ ಮೋಡಣ್ಣಾ, ದಮ್ಮಯ್ಯಣ್ಣ, ಬಾ ಬಾ ಕೊಡುವೆನೊ ಬಾಳೆಯ ಹಣ್ಣ. ಏನನು ಮಾಡಿದೆ ನಾ ನಿನಗಣ್ಣ? ಎಂದು ಪರಿಪರಿಯಾಗಿ ಬೇಡಿಕೊಳ್ಳುತ್ತಿದ್ದಾನೆ. ಒಂದೇ ಒಂದು ದಿನ ನಿನ್ನಲ್ಲಿರುವೆ. ನನಗೆ ಅವಶ್ಯವೆನಿಸುವ ಕೊಡೆ, ಕಂಬಳಿ, ಹಾಸಿಗೆ, ಹೊದಿಕೆಯನ್ನೆಲ್ಲಾ ನಾನೇ ತರುವೆ, ನಿನಗೆ ಯಾವುದೇ ತೊಂದರೆ ಕೊಡದೆ ಮರುದಿನವೇ ಹಿಂತಿರುಗುತ್ತೇನೆ ಎಂದು ಅಂಗಲಾಚುತ್ತಾನೆ. ಆದರೆ ಒಂದು ದಿನವಲ್ಲ ಒಂದು ಕ್ಷಣವೂ ಮನುಷ್ಯನೊಂದಿಗಿನ ಸ್ನೇಹ ಪ್ರಕೃತಿಗೆ ಬೇಡವೆನ್ನಿಸುತ್ತದೆ. ಈ ಸತ್ಯವನ್ನು ಸಾರುವ ಪ್ರಯತ್ನವೂ ಕೃತಿಯಲ್ಲಿ ನಡೆದಿದೆ.

ಮೋಡಣ್ಣನಿರುವ ಸ್ಥಳ ಹುಡುಗನಿಗೆ ಸಮೃದ್ಧಿಯ ಔನ್ನತ್ಯವಿರುವ ಮಾಯಪ್ರಪಂಚವಾಗಿದೆ. ಅಲ್ಲಿ ಯಾವುದಕ್ಕೂ ಕಡಿಮೆಯಿಲ್ಲ, ಕೊನೆಯಿಲ್ಲ ಎಂಬ ಭ್ರಮೆ ಈ ಹುಡುಗನದು. ಆದ್ದರಿಂದಲೇ "ಇಂತಿರೆ ನಿನ್ನೀ ಮಹಿಮೆಯು, ಅಣ್ಣಾ, ಚಿಂತೆಯದೇತಕೆ ಕರೆದೊಯ್ಯೆನ್ನ ಎಂದು ಕೇಳಿಕೊಳ್ಳುತ್ತಾನೆ. ಹುಡುಗ ಚಿಕ್ಕವನಾಗಿದ್ದರೂ ಅವನ ಊಹೆ ಕಲ್ಪನೆಗಳು ಮಹತ್ತರವಾದುದಾಗಿದೆ. ಅವನ ಸಂಪರ್ಕಕ್ಕೆ ಬಾರದ ಶಕ್ತಿಗಳೊಂದಿಗೆ ಈ ರೀತಿಯ ವಾಗ್ ವಿನಿಮಯ ನಿಜಕ್ಕೂ ಅಚ್ಚರಿ ಹುಟ್ಟಿಸುತ್ತದೆ. ಹುಡುಗನ ನಡಾವಳಿಗಳನ್ನು ಕಂಡು ಮೋಡಣ್ಣನೇ ಭಯಗೊಂಡಿದ್ದಾನೆ. ನೀನು ಇಲ್ಲಿಗೆ ಬಂದರೆ ನಿನಗೆ ಹಾಲನ್ನು ಕೊಡುವವರಾರು, ಮೈಯನು ತೊಳೆವವರು ಯಾರು, ನಿನ್ನನು ಸಂತೈಸುವವರಾರು? ನೀ ಮಾಡುವ ಗಲಭೆ ಗದ್ದಲಗಳನ್ನೆಲ್ಲ ನಾ ಅರಿತಿರುವೆ. ಎಷ್ಟೋ ಬಾರಿ ತಾಯಿ ನಿನ್ನನು ಸಂತೈಸಿರುವುದು ನಾ ಕಂಡಿರುವೆ. ಸಜ್ಜನ ನೀನೆಂಬುದ ನಾ ಬಲ್ಲೆ, ಅಜ್ಜನ ಬಳಿ ಹೋಗೈ ಎಂದು ಹುಡುಗನನ್ನು ಸಂತೈಸುತ್ತಾನೆ. ಮೋಡಣ್ಣನ ಬಾಯಿಂದ ಹೊರಡುವ ಈ ಮಾತುಗಳು ನಿಜವಾಗಿಯೂ ಹುಡುಗನನ್ನು ತನ್ನತ್ತ ಬಾರದಂತೆ ತಡೆಯಲು ಪ್ರಯತ್ನಿಸುತ್ತಿವೆ. ನಾಗರೀಕ ಬದುಕಿನ ಸ್ಪರ್ಶ ಪ್ರಕೃತಿ ಪ್ರಪಂಚಕ್ಕೆ ತಾಕಬಾರದು ಎಂಬ ಉದ್ದೇಶವನ್ನಿಟ್ಟುಕೊಂಡು ಕವಿ ಈ ಸಂಭಾಷಣೆಯನ್ನು ನಾಟಕದ ಭಾಗವಾಗಿ ತಂದಿರುವರೊ ಎಂದನ್ನಿಸುತ್ತದೆ.

ಮೋಡಣ್ಣನ ಈ ಮಾತುಗಳಿಂದ ಮತ್ತೂ ಬೇಸರಗೊಂಡ ಬಾಲಕ ಕಾಡನ್ನು ಸಹಾಯಕ್ಕೆ ಕರೆಯುತ್ತಾನೆ. ಈ ಹಿಂದೆ ಗಿರಿಯಣ್ಣನ ಮಾತುಗಳನ್ನು ಮೋಡಣ್ಣ ತಿರಸ್ಕರಿಸಿದ ವಿಚಾರವಾಗಿ ಕಾಡಣ್ಣನಿಗೆ ತಿಳಿಸುತ್ತಾನೆ. "ಋಣಿಯಾಗಿರುವೆನೊ ನಾ ನಿನಗೆಂದು" ಎಂದು ಕಾಡಣ್ಣನ ಮನವೊಲಿಸಲು ಪ್ರಯತ್ನಿಸುತ್ತಾನೆ. ಸಹಾಯಕ್ಕಾಗಿ ಅಂಗಲಾಚುತ್ತಾನೆ. ಆದರೆ ಕಾಡಣ್ಣ ತಮ್ಮನ ಮಾತನ್ನು ಸಂಪೂರ್ಣವಾಗಿ ತಿರಸ್ಕರಿಸಿ ಅಮಾನವೀಯ ಮಾನವ ಸಮುದಾಯ ರೂಢಿಸಿಕೊಂಡಿರುವ ಕ್ರೌರ್ಯದ ನಾನಾವಸ್ಥೆಗಳನ್ನು ಮೋಡಣ್ಣನಿಗೆ ಪರಿಚಯಿಸುತ್ತಾನೆ. ಅದರಿಂದಾಗುವ ಅನೇಕ ಅನರ್ಥಗಳ ಪರಂಪರೆಯನ್ನು ಕಟ್ಟಿಕೊಡುತ್ತಾನೆ. ಮನುಷ್ಯ ಸೃಷ್ಟಿಯಾದಾಗಿನಿಂದ ಇಲ್ಲಿಯವರೆಗೆ ನಡೆದ ಎಲ್ಲಾ ದುಶ್ಕೃತ್ಯಗಳ ಪಟ್ಟಿಯನ್ನು ಕಾಡಣ್ಣ ಬಯಲಿಗೆಳೆಯುತ್ತಾನೆ. ಮಾನವ ಜನಾಂಗ ಕಾಡಣ್ಣನಿಗೆ ಕೊಟ್ಟ ಕಷ್ಟ ದುಃಖಗಳು ಕೊನೆಗಾಣದಂತಹವು. ಅಂತೆಯೇ ಮರೆಯಲಾರದಂತಹವು. ಈ ದುರಂತವನ್ನು ಕವಿ ಕೃತಿಯಲ್ಲಿ ಕಾಡಣ್ಣನೆಂಬ ಪಾತ್ರವನ್ನು ಪ್ರತಿನಿಧೀಕರಿಸಿ ಸ್ವತಃ ಆತನ ಬಾಯಿಂದಲೇ ಮನುಷ್ಯನ ದುಷ್ಟತನವನ್ನು ದಾಖಲಿಸುತ್ತಿರುವುದು ಮಾರ್ಮಿಕವಾಗಿದೆ. ಈ ದುರಂತಕ್ಕೆ ಅಥವಾ ದುಃಖಾಂತಕ್ಕೆ ಆಧುನಿಕ ಜಗತ್ತಿನ ಪ್ರಗತಿ ಮತ್ತು ಅಭಿವೃದ್ಧಿ ಪರಿಕಲ್ಪನೆಗಳೇ ನಿತ್ಯ ಸಾಕ್ಷಿಗಳಾಗಿವೆ. ಆಧುನಿಕ ನಾಗರೀಕತೆಯ, ಪ್ರಗತಿಯ, ವಿಜ್ಞಾನ – ತಂತ್ರಜ್ಞಾನದ ಸೆಳೆತಕ್ಕೆ ಸಿಲುಕಿರುವ ಮಾನವ ನಿರಂತರವಾಗಿ ಅರಣ್ಯ ನಾಶಕ್ಕೆ ಮುಂದಾಗಿದ್ದಾನೆ. ಆತ ಮಾಡಿದ, ಮಾಡುತ್ತಿರುವ, ಮಾಡುವ ಎಲ್ಲಾ ಕ್ರಿಯೆಗಳನ್ನು ಕಾಡಣ್ಣನ ಧ್ವನಿಯಿಂದಲೇ ಕೇಳಿದರೆ ಹೆಚ್ಚು ಪರಿಣಾಮಕಾರಿಯಾಗುತ್ತದೆ. ಅಸಂಖ್ಯಾತ ವರ್ಷಗಳಿಂದ ಮೋಸದ ಮಾತುಗಳನ್ನು ಆಡಿಕೊಂಡು ಬಂದಿರುವ ಮಾನವನನ್ನು ತಿರಸ್ಕಾರಭಾವದಿಂದ ಕಾಣುತ್ತಾನೆ.

"ಬಿಡೊ ಬಿಡೊ ನಿನ್ನೀ ಸುಣ್ಣನೆ ನುಡಿಗಳ :
ಕಡಿ ಕಡಿ ಎನ್ನುವೆ ತಂದೆಗೆ ಬುಡಗಳ
ಬೆಂಕಿಯ ಬುಡಗಳಿಗಿಡಿಸುವನು,
ಧಗ ಧಗ ಉರಿಸುವನು!
ಅಂಕೆಯೆ ಇಲ್ಲದೆ ಕಡಿಸುವನು,

ಸೊಬಗನೆ ಕೆಡಿಸುವನು!

ಸೊಟ್ಟನೆ ಮರಗಳನೊಡಿಸುವನು!

ಕಟ್ಟಿಗೆಯಂದದಿ ಸುಡಿಸುವನು!

ದಟ್ಟನೆ ಎನ್ನನು ಕಡಿ ಕಡಿದು

ಮಟ್ಟವ ಮಾಡುವರಡಿಗಡಿಗೆ."[೪]

ಇದು ಮನುಷ್ಯನಿಂದ ಕಾಡಣ್ಣನಿಗೆ ಆಗುತ್ತಿರುವ ಆಘಾತಗಳ ಪಟ್ಟಿ. ಭವಿಷ್ಯದಲ್ಲಿ ದುರಂತದ ಹಾದಿ ತನಗೂ ಕಾದಿದೆ ಎಂಬ ಸತ್ಯಾಂಶವನ್ನು ಮಾನವ ಮರೆತಿದ್ದಾನೆ. ಪ್ರಕೃತಿ ಮಾತೆಯ ಸಂಪತ್ಭರಿತ ಒಡಲನ್ನು ಲೂಟಿ ಮಾಡುವುದು ಮತ್ತು ಬರಿದುಗೊಳಿಸುವುದರ ಮೂಲಕ ಕೈಗಾರಿಕೆಗಳನ್ನು ಸ್ಥಾಪಿಸುವುದೇ ನನ್ನ ಆದ್ಯ ಕರ್ತವ್ಯವೆಂಬ ತಪ್ಪು ಗ್ರಹಿಕೆ ಆಧುನಿಕ ಮಾನವನನ್ನು ಕಾಡುತ್ತಿದೆ. ಪ್ರಕೃತಿಯ ಆರಾಧನೆ ಪರಮನಾರಾಧನೆ ಎಂಬ ಅಂಶವನ್ನು ಮನುಷ್ಯ ಪೂರ್ಣವಾಗಿ ಕಡೆಗಣಿಸಿದ್ದಾನೆ. ಸಸ್ಯ ಸಂರಕ್ಷಣೆ ಶ್ರೇಷ್ಠತರ ಮೌಲ್ಯವೆಂಬುದನ್ನು ಮರೆತೇ ಹೋಗಿದ್ದಾನೆ. ಹಾಗಾಗಿ ಕಾಡಣ್ಣ ತೀವ್ರವಾಗಿ ನೊಂದುಕೊಳ್ಳುತ್ತಾ ಹೀಗೆ ನುಡಿಯುತ್ತಾನೆ.

"ಕಡಿವರೆ ಹೊರತೂ ಬಂದವರೆಲ್ಲಾ

ನೆಡುವರನೊಬ್ಬರ ಕಾಣಲೆ ಇಲ್ಲಾ

ಇದ್ದಿಲ ನೆವದಿಂ ಕಡಿವರು ಕೆಲರು

ಗೆದ್ದಲಿಗೆನ್ನನು ಕೊಡುವರು ಕೆಲರು!"[೫]

ಹೀಗೆ ಯಾವುದೇ ಸದ್ದುಗದ್ದಲವಿಲ್ಲದೆ ಆಧುನಿಕ ಮನಸ್ಥಿತಿ ಸದಾ ಪ್ರಕೃತಿ ವಿನಾಶದಲ್ಲಿ ತೊಡಗಿರುವುದು ಶೋಚನೀಯ ಸಂಗತಿಯಾಗಿದೆ. ಜಗತ್ತಿಗೆ ಮುಂದೆ ಒದಗಲಿರುವ ಸಂಕಟಕ್ಕೆ ಇದು ನಾಂದಿಯೂ ಆಗಲಿದೆ. ರಾಷ್ಟ್ರದ ಆರ್ಥಿಕತೆಯ ಮೇಲೂ ಇದು ಪ್ರಭಾವ ಬೀರಲಿದೆ. ಅರಣ್ಯ ನಾಶ ದೇಶದ ಪ್ರಗತಿಗೆ ದಾರಿಯಾಗುತ್ತದೆ ಎಂದು ತಿಳಿದಿರುವ ಸಮಾಜಕ್ಕೆ ಕಾಡಣ್ಣನ ಎಚ್ಚರಿಕೆಯ ಮಾತುಗಳು ಹಿತವೆನಿಸುತ್ತಿಲ್ಲ. ಮನುಷ್ಯನ ಕೃತ್ಯದಿಂದ ಕಾಡು ಸಂಪೂರ್ಣ ನಾಶವಾಗುತ್ತಿರುವ ನೆಲೆಯನ್ನು ಮೋಡಣ್ಣನಿಗೆ ವಿವರಿಸುತ್ತಿದ್ದಾನೆ. ಕಾಡು ದಟ್ಟವಾಗಿರಲು ನೀನೆಲ್ಲಲ್ಲೂ ರಾರಾಜಿಸುವೆ. ಮೋಡದ ಛಾಯೆ ಎಲ್ಲೆಲ್ಲೂ ಕಾಣುತ್ತದೆ. ಅಂದರೆ ಕಾಡಿನಿಂದಲೇ ಮೋಡ. ಕಾಡು ವಿನಾಶದ ಹಾದಿಯನ್ನು ಹಿಡಿದರೆ ನೀನೂ ವಿನಾಶದ ಹಾದಿಯಿಡಿಯುವೆ ಎಂದು ತಿಳಿಸುತ್ತಿದ್ದಾನೆ. ಕಾಡು ಮತ್ತು ಮೋಡಗಳ ನಡುವಿನ ಸ್ನೇಹವನ್ನು ಕೊನೆಗೊಳಿಸುವವರು ಈ ಮನುಜರು. ಹಾಗಾಗಿ ಇವರ ಬಗ್ಗೆ ಎಚ್ಚರಿಕೆಯನ್ನು ಉಳಿಸಿಕೊಳ್ಳುವುದು ಒಳಿತು ಎಂದು ಕಾಡಣ್ಣ ಬುದ್ಧಿಮಾತನ್ನು ಹೇಳುತ್ತಿದ್ದಾನೆ. 'ಮನುಜರು ಹೋದೆಡೆಯೆಲ್ಲಾ ಹಾಳು' ಎಂಬ ಸತ್ಯಾಸತ್ಯತೆಯನ್ನು ಕಾಡಣ್ಣ ಪ್ರತಿಪಾದಿಸುತ್ತಿದ್ದಾನೆ. 'ನೀನು ಇವನನ್ನು ಕೊಂಡೊಯ್ದರೆ ತಪ್ಪದೊ ಗೋಳು' ಎಂದು ಅವನಿಂದಾಗುವ ತೊಂದರೆಗಳಿಗೆ ಮುನ್ಸೂಚನೆಯನ್ನು ಕೊಡುತ್ತಿದ್ದಾನೆ.

ಇಷ್ಟಾದರೂ ಹುಡುಗ ಮೋಡಣ್ಣನನ್ನು ಬಿಟ್ಟು ಬಿಡದೆ ಮತ್ತೂ ಪೀಡಿಸುತ್ತಿದ್ದಾನೆ. ತನಗಿರುವ ಎಲ್ಲಾ ಆಸೆ, ಆಕಾಂಕ್ಷೆಗಳನ್ನು ಮುಂದಿಡುತ್ತಿದ್ದಾನೆ. ಹರಿಯುವ ಹೊಳೆಗಳನ್ನು, ಮೆರೆಯುವ ಪುರಗಳನ್ನು, ಗಿರಿಯಾಚೆಯ ಬಯಲನ್ನು, ಚಂದ್ರನನ್ನು ನಾ ಕಾಣಬೇಕು ಎಂದು ಗೋಗರೆಯುತ್ತಾನೆ. ಈ ಮೂಲಕ ಕವಿ ಮನುಷ್ಯ ಮತ್ತು ನಿಸರ್ಗದ ನಡುವೆ ಇರುವ ಅಂತರಗಳನ್ನು ಒಡೆಯುವ ಪ್ರಯತ್ನ ಮಾಡಿದ್ದಾರೆ. ಹುಡುಗನ ಈ ಬಗೆಯ ನಿರಂತರ ಬೇಡಿಕೆಯನ್ನು ಕೇಳಿ

ಕೇಳಿ ಮೋಡಣ್ಣ ಕರುಣೆಯನ್ನು ತೋರಿಸುತ್ತಾನೆ. ಅಂತೆಯೇ ಮುಗ್ಧತೆಯಿಂದ ಕೂಡಿರುವ ಮನಸ್ಸಿಗೆ ಬುದ್ಧಿವಾದವನ್ನು ಹೇಳಲು ಮುಂದಾಗುತ್ತಾನೆ. ಮೋಡಣ್ಣ ತನಗಿರುವ ಎಲ್ಲಾ ಕೆಲಸ ಕಾರ್ಯಗಳನ್ನು ಪಟ್ಟಿ ಮಾಡುತ್ತಾನೆ. ವರ್ಷದ ಕಪ್ಪವನ್ನು ತೀರಿಸಲು ಸಾಗರರಾಜ ನನ್ನನ್ನು ನಿಯಮಿಸಿದ್ದಾನೆ. ಆದರೆ ಮಾರ್ಗಮಧ್ಯದಲ್ಲಿ ಅನೇಕ ಗೆಳೆಯರ ಸ್ನೇಹ ನನ್ನನ್ನು ಬಂಧಿಸಿದೆ. ಅಂತೆಯೇ ಪಶ್ಚಿಮಘಟ್ಟದ ಗೆಳೆಯನ ಜೊತೆ ಕೂಡಿ ಅದ್ಭುತವಾದ ಸೊಬಗನ್ನು ವೀಕ್ಷಿಸುತ್ತಾ ಕೆಲದಿನ ಅಲ್ಲಿಯೇ ಕಾಲ ಕಳೆದೆ. ಅಲ್ಲಿಂದಿಲ್ಲಿ ಇಲ್ಲಿಂದಲ್ಲಿ ಸಂಚರಿಸುತ್ತಲೇ ಸಾಕಷ್ಟು ಸಮಯ ಕಳೆದು ಹೋಯಿತು. ಈಗಾಗಲೇ ಸಾಕಷ್ಟು ದಣಿದಿದ್ದೇನೆ. ಬೋರೇಗೌಡ, ಮಾದೇಗೌಡನಂತಹ ಜನರ ಬೈಗುಳಗಳನ್ನು ನಾ ಕೇಳಬೇಕಾಗಿದೆ. ಹೀಗೆ ನನ್ನ ಬಾಳಿಗೆ ಇರುವ ಸುಖವೂ ಸಾಕು, ಗೋಳೂ ಸಾಕು ಎಂದು ಹುಡುಗನ ಮನವನ್ನು ಪರಿವರ್ತಿಸುತ್ತಾನೆ. ಇಷ್ಟಾದರೂ ನಾನು ನಿನ್ನ ಸ್ನೇಹವನ್ನು ಮರೆಯಲಾರೆನು ಎಂದು ಹೇಳುತ್ತಿದ್ದಾನೆ. ಇದರಿಂದ ಹುಡುಗ ತಾನು ಮಾಡಿದ ತಪ್ಪನ್ನು, ಭಯಂಕರ ಹಟವನ್ನು ನೆನಪಿಸಿಕೊಂಡು ಏನೂ ಅರಿಯದ ತಮ್ಮನು ಮಾಡಿದ ತಪ್ಪನ್ನು ಮನ್ನಿಸು ಎಂದು ಅಣ್ಣನಲ್ಲಿ ಮೊರೆಯಿಡುತ್ತಿದ್ದಾನೆ. ಆಧುನಿಕ ಮಾನವನಂತೆ ಯಾವುದೇ ದುಶ್ಚಟ, ದುರಾಭ್ಯಾಸಗಳಿಗೆ ಒಳಗಾಗದಂತೆ, ಮುಂದಿನ ಭವಿಷ್ಯ ಸುಭಿಕ್ಷವಾಗುವಂತೆ ಸಹಾಯಕವಾಗುವ ಕೆಲ ಬುದ್ಧಿಮಾತುಗಳನ್ನು ಹೇಳು ಎಂದು ಅನುಭವಶಾಲಿಯಾದ, ಪಂಡಿತನಾದ ಅಣ್ಣನನ್ನು ಕೇಳಿಕೊಳ್ಳುತ್ತಿದ್ದಾನೆ.

ಇಲ್ಲಿ ಬರುವ ಮೋಡಣ್ಣನ ತಮ್ಮ ಕೇವಲ ಮಗುವಲ್ಲ. ಭಾರತಮಾತೆಯ ಪ್ರತಿನಿಧಿ. ಅವನಲ್ಲಿ ಹರಿಯುತ್ತಿರುವ ರಕ್ತ ಭರತಮಾತೆಯ ಭಕ್ತಿಯನ್ನು ತೋರಿಸುತ್ತದೆ. ಪರಂಪರೆಯಿಂದ ಬಂದಿರುವ ಯಾಂತ್ರೀಕೃತ ದೇವಾಲಯ, ಪೂಜೆ, ಪೂಜಾರಿಗಳ ಬಗೆಗೆ ತಿರಸ್ಕೃತ ಭಾವನೆಯನ್ನು ತಳೆದಿದ್ದಾನೆ. ನೈಜ ಆಲೋಚನೆ ಮತ್ತು ವಿಚಾರಗಳನ್ನು ರೂಢಿಸಿಕೊಂಡಿರುವ ವ್ಯಕ್ತಿತ್ವ ಇವನದಾಗಿದೆ. ಹೀಗೆ ಕುವೆಂಪು ಅವರು ನೈಜ ವಿಚಾರವನ್ನು ಮಕ್ಕಳಲ್ಲಿ ಬೆಳೆಸುವುದರ ಮೂಲಕ ವಿಶ್ವಮಾನವತೆಯನ್ನು ಎತ್ತಿ ಹಿಡಿದಿದ್ದಾರೆ. ಅಂತೆಯೇ ಪಂಚಮಂತ್ರ, ಸಪ್ತಸೂತ್ರಗಳನ್ನು ಅನುಷ್ಠಾನಕ್ಕೆ ತಂದಿದ್ದಾರೆ. ಇದು ಕುವೆಂಪು ಅವರು ಮಕ್ಕಳಲ್ಲಿ ಬೆಳೆಸುತ್ತಿರುವ ಸಾಂಸ್ಕೃತಿಕ ರಾಜಕಾರಣವಾಗಿದೆ. ಮಗು ಸಾಮಾನ್ಯವಲ್ಲ. ವಾಲ್ಮೀಕಿ, ವ್ಯಾಸ, ಪರಮಹಂಸ, ವಿವೇಕಾನಂದ, ಗಾಂಧಿ ಅಂತಹ ಗಣ್ಯರ ಕೃತಿಗಳ ಅಥವಾ ಬೋಧನೆಯ ತತ್ತ್ವಗಳ ಸಂಕ್ಷಿಪ್ತ ಕೃತಿಯಂತೆ ಇದ್ದಾನೆ ಇಲ್ಲಿನ ಮಗು. ಆ ಎಲ್ಲಾ ತತ್ತ್ವಗಳ ಸಾರವನ್ನು ಮೋಡಣ್ಣ ಹುಡುಗ ಕಿಟ್ಟುವಿನ ಮುಂದೆ ಪ್ರತಿಷ್ಠಾಪಿಸಿ ಒಂದು ವಿರಾಟ್‌ದರ್ಶನವನ್ನು ಕಟ್ಟುತ್ತಿದ್ದಾನೆ.

"ಸತ್ಯವನೆಂದಿಗು ಬಿಡಬೇಡ :
ಮಿಥ್ಯೆಯನೆಂದೂ ಹಿಡಿಯಲು ಬೇಡ !
ಚಿತ್ತದಿ ಭಕ್ತಿಯ ಬೀಜವನು
ಬಿತ್ತುತ ಪಡೆಯೈ ಮುಕ್ತಿಯನು!
ನಿರ್ಮಲ ಮನುಜನೆ ದೇವಾಲಯವೊ;
ನಿರ್ಮಲ ಹೃದಯವೆ ದೇವರ ಪೀಠ!
ಶುದ್ಧವಾದ ಮನಸೇ ಪೂಜಾರಿ :
ಶುದ್ಧಾಲೋಚನೆಗಳೆ ಸುಮಹಾರ!"[೬]

ಸತ್ಯ ಮತ್ತು ಮಿಥ್ಯೆ, ಭಕ್ತಿ ಮತ್ತು ಮುಕ್ತಿಗಳ ಬಗೆಗೆ ಭಾರತೀಯ ಸಂವೇದನೆ ಶೋಧಿಸಿಕೊಂಡ ಅಸಂಖ್ಯ ಮಾರ್ಗಗಳನ್ನು ಇಲ್ಲಿ ಕಾಣಿಸಿದ್ದಾರೆ. ಅಂತೆಯೇ ಮೋಡಣ್ಣ ತಮ್ಮನಿಗೆ ಧರ್ಮ, ಸತ್ಯ, ಭಕ್ತಿ, ನಿಷ್ಠೆಗಳು ನಿನ್ನ

ಮನದಾಳದಲ್ಲಿ ಮೂಡಬೇಕು. ಅವುಗಳ ತಣ್ಣನೆಯ ನೆರಳಲ್ಲಿ ನೀನು ಬೆಳೆಯಬೇಕು. ಸದಾ ದೇವರ ಪ್ರಾರ್ಥನೆಯಲ್ಲಿ ನಿನ್ನನ್ನು ತೊಡಗಿಸಿಕೊಳ್ಳಬೇಕು ಎನ್ನುತ್ತಿದ್ದಾನೆ. ನಿಸರ್ಗದ ಸಮಸ್ತ ಸಚರಾಚರಗಳು ಸಮನಾಗಿ ಬದುಕಬೇಕು ಎಂಬ ವಿಚಾರ ಇಲ್ಲಿ ಪ್ರತಿಪಾದಿತವಾಗಿದೆ. ಏಕಾಲಜಿಯ ಚಿಂತನೆ ಇಲ್ಲಿದೆ. ಪರಿಸರ ಆಂದೋಲನಗಳ ರೂಪುರೇಷೆಗಳು ಇನ್ನೂ ಗಾಢಗೊಳ್ಳದೇ ಇದ್ದ ಸಂದರ್ಭದಲ್ಲಿ ಇಂಥ ಕೃತಿಯನ್ನು ಸೃಷ್ಟಿಸಿರುವುದು ಕನ್ನಡ ಸಂವೇದನೆಯ ಬಹುದೊಡ್ಡ ಶೋಧವಾಗಿದೆ.

ಜಾತಿ, ವೈರಗಳು ನಿನ್ನ ಬಳಿ ಸುಳಿಯದಂತೆ ಗಮನವಹಿಸಬೇಕು. ನೀತಿ, ನಡತೆಗಳು ನಿನ್ನ ಅವಿಭಾಜ್ಯ ಅಂಗವಾಗಬೇಕು. ಮೋಸ, ಕಪಟ, ಕುಟಿಲತೆಗಳಿಂದ ಕೂಡಿದ ಮಾನವ ಯೋಗ್ಯನಾಗಲಾರ. ಹಾಗಾಗಿ ನಿನ್ನ ಹೃದಯದಲ್ಲಿ ನಿರ್ಮಲವಾದ, ಶುದ್ಧವಾದ ಆಲೋಚನೆಗಳನ್ನು ಬೆಳೆಸಿಕೋ ಎಂದು ನೀನು ಸಾಮಾನ್ಯತೆಯನ್ನು ಮೀರಿ ಅಸಮಾನ್ಯತೆಯ ಕಡೆಗೆ ಚಲಿಸುವ ಧರ್ಮಮೇಘವಾಗಬೇಕು ಎಂದು ಮೋಡಣ್ಣ ತಮ್ಮನಿಗೆ ಉಪದೇಶ ಮಾಡುತ್ತಿದ್ದಾನೆ. ಇದು ಇಡೀ ಭಾರತೀಯ ಸಂವೇದನೆಯಲ್ಲಿ ಅನಾದಿ ಕಾಲದಿಂದ ಹರಿಯುತ್ತಿರುವ ವಿಚಾರಧಾರೆಯಾಗಿದೆ. ಮೋಡಣ್ಣ ಉಚ್ಚರಿಸಿದ 'ಧರ್ಮಮೇಘ' ಎಂಬ ಶಬ್ದ ಆತನ ಇಡೀ ದಿಕ್ಕನ್ನೇ ಬದಲಿಸಿದೆ. ಒಂದು ಹೊಸ ಜವಾಬ್ದಾರಿಯನ್ನು ಹೊತ್ತ ಯೋಗಿಯಂತೆ ಈತ ನಮಗೆ ಗೋಚರಿಸುತ್ತಾನೆ. ಮೋಡಣ್ಣ ಇಲ್ಲಿಯವರೆಗೂ ವ್ಯಕ್ತಿಗತ ಬುದ್ಧಿವಾದವನ್ನು ಹೇಳುತ್ತಿದ್ದು ಈಗ ನೇರವಾಗಿ ನಾಡು, ನುಡಿ, ಕನ್ನಡ ಮಾತೆ ಮತ್ತು ಭರತ ಮಾತೆಯ ಬಗ್ಗೆ ಹೇಳುತ್ತಿದ್ದಾನೆ. ರಾಷ್ಟ್ರಾಭಿಮಾನ, ರಾಜ್ಯಾಭಿಮಾನಗಳು ಜಾಗೃತಗೊಳ್ಳಬೇಕು. ಭರತ ಮಾತೆಯನ್ನು ಪ್ರೀತಿ ಗೌರವಗಳಿಂದ ಪೋಷಿಸಬೇಕು ಎನ್ನುವ ಹೊಣೆಗಾರಿಕೆಯನ್ನು ತಮ್ಮನಲ್ಲಿ ವ್ಯಕ್ತಪಡಿಸುತ್ತಿದ್ದಾನೆ. ಪುರಾಣ, ಇತಿಹಾಸದಲ್ಲಿನ ಶ್ರೇಷ್ಠಾತಿಶ್ರೇಷ್ಠರ ಮೂಲಕ ಹುಡುಗನನ್ನು ಚಿತ್ರಿಸುತ್ತಿದ್ದಾನೆ. ಕಪಿಲ ಮಹರ್ಷಿಯ ಪುತ್ರನಾಗಿ, ಯೋಗಿ ಪತಂಜಲವನ್ನು ಒಲಿದವನಾಗಿ, ಗೌತಮನ ಪ್ರೀತಿಯನ್ನು ಗೆದ್ದವನಾಗಿ, ಕೃಷ್ಣನ ಸ್ನೇಹಿತನಾಗಿ, ಶ್ರೀ ಮಚ್ಛಂಕರ ಗುರುವರರ ಕೃಪೆಯಿಂದ ರೂಪುಗೊಂಡ ಆತ್ಮನಾಗಿ ಕಲ್ಪಿಸಿಕೊಳ್ಳುತ್ತಿದ್ದಾನೆ. ಇವರಷ್ಟೇ ಮಹತ್ವವನ್ನು ಬಾಲಕನಿಗೂ ಕೊಡುತ್ತಿದ್ದಾನೆ. ಭಾರತೀಯ ಸಂಸ್ಕೃತಿಯ ಪ್ರಮುಖ ಭಾಗವಾಗಿರುವ ರಾಮಾಯಣ, ಮಹಾಭಾರತಗಳು ನಿನಗಾಗಿಯೇ ರಚಿತಗೊಂಡಿವೆಂಬುದನ್ನು ತಿಳಿಯಪಡಿಸುತ್ತಿದ್ದಾನೆ. ರಾಮಕೃಷ್ಣ, ವಿವೇಕಾನಂದರ ಕೃಪಾಮಹಿಮೆ ಈತನಿಗೆ ಶ್ರೀರಕ್ಷೆಯಾಗಿರುವುದನ್ನು ಅರಿತಿದ್ದಾನೆ. ಮಹಾತ್ಮಗಾಂಧಿಯ ಪ್ರಜ್ಞಾವಲಯದಲ್ಲಿ ಮೂಡಿಬಂದ ತತ್ತ್ವಾಲೋಚನೆಗಳಿಗೆ ಮೂಲವಾಗಿರುವ ಬಗ್ಗೆಯೂ ಮೋಡಣ್ಣನಿಗೆ ಹೆಮ್ಮೆಯಿದೆ.

ಹೀಗೆ ನಾನಾ ನೆಲೆಗಳಲ್ಲಿ ಮಗುವಿಗೆ ಬುದ್ಧಿಮಾತುಗಳನ್ನು ಹೇಳಿದ ಮೋಡಣ್ಣ ಈ ಎಲ್ಲಾ ಮಾತುಗಳು ಆಲಿಸಿ ಮರೆಯುವ ಮಾತುಗಳಲ್ಲ. ಊಹಿಸಿ ರಚಿಸಿದ ಕವನಗಳಲ್ಲ. ಕೈ ಚಪ್ಪಾಳೆಗೆ ಮಾತ್ರ ಸೀಮಿತವಾಗಿಲ್ಲ ಎಂದು ಇವುಗಳ ಮಹತ್ವವನ್ನು ಸಾರುತ್ತಾ ಬಾಲನೆ ಅನುಸರಿಸಿವುಗಳನ್ನೆಲ್ಲ ಎಂದು ಹೇಳುತ್ತಾನೆ. ಹೀಗೆ ಮುಗ್ಧ ಮಗುವನ್ನು ತಿದ್ದುವ ಪ್ರಯತ್ನ ಪ್ರಕೃತಿ ಮಾತೆಯ ಮೇಲಿರುವುದು ನಿಜವಾಗಿಯೂ ಬಹುಮುಖ್ಯವಾದುದಾಗಿದೆ. ಆದಿ ಮತ್ತು ಅನಾದಿ ಕಾಲದ ಜೀವಕೇಂದ್ರಿತ ಮೌಲ್ಯಗಳನ್ನು ಪ್ರತಿಯೊಬ್ಬ ವಿಶ್ವಪ್ರಜೆಯು ಅನುಸರಿಸಬೇಕಾದ ಅನಿವಾರ್ಯತೆಯನ್ನು ಕುವೆಂಪು ಒತ್ತಿ ಹೇಳಿದ್ದಾರೆ. 'ನನ್ನುಪದೇಶವ ಮರೆಯದಿರು' ಎನ್ನುವ ಮಾತು ಮಾನವೀಯ ಮೌಲ್ಯಗಳ ಸಮಗ್ರತೆಯನ್ನು ಧ್ವನಿಸುತ್ತದೆ. ಈ ಉಪದೇಶದ ಮೂಲಕ ಆತ್ಮಶ್ರೀ ಪ್ರಜ್ಞೆಯನ್ನು ಬೆಳೆಸುವ ಹುನ್ನಾರನ್ನು ಕುವೆಂಪು ಮಾಡುತ್ತಿದ್ದಾರೆ. ಮನುಷ್ಯ ಮತ್ತು ನಿಸರ್ಗದ ನಡುವೆ ಇರುವ ಅಂತರಗಳನ್ನು ಒಡೆಯುವ ಪ್ರಯತ್ನ ಗುಪ್ತಗಾಮಿನಿಯಾಗಿ ಹರಿದಿದೆ.

ನಾ ಹೇಳಿದ ಬುದ್ಧಿ ಮಾತುಗಳನ್ನು ನೀನು ನಿನ್ನ ಜೀವನದಲ್ಲಿ ಅಳವಡಿಸಿಕೊಂಡಿದ್ದೇ ಆದರೆ ಆಗ ನಾನು ಬಂದು ನಿನ್ನನ್ನು ಕರೆದೊಯ್ಯುವೆ ಎಂದು ಹೇಳಿ ಮೋಡಣ್ಣ ತನ್ನ ನಿತ್ಯ ಕ್ರಿಯೆಗಳಲ್ಲಿ ತೊಡಗಿದ. ವಿಶಾಲವಾದ ಮೋಡದ ನಾಡಿನಲ್ಲಿ ತೇಲಿ ಹೋದ. ಮೋಡಣ್ಣ, ಕಾಡಣ್ಣ, ಗಿರಿಯಣ್ಣನ ಜೊತೆ ಹುಡುಗ ಸಂಭಾಷಣೆಯಲ್ಲಿ ಮಗ್ನನಾಗಿರುವಾಗ ಅತ್ತ ತಾಯಿಯ ನೆನಪು ಇಲ್ಲದಂತಾಗುತ್ತದೆ. ಆ ಕಡೆಯಿಂದ ತಾಯಿಯ ಪ್ರೀತಿಯ ಕರೆ ಕೇಳಿಬಂದಾಗಲೇ ಹುಡುಗನು ಅಸ್ಪಷ್ಟವಾಗಿ ಲೌಕಿಕ ವ್ಯಾಪ್ತಾರಗಳತ್ತ ಮುಖ ಮಾಡುವುದು. ಕಿಟ್ಟೂ ಬಾರೋ ಬೇಗ ಎಂದು ತಾಯಿ ಕೂಗಿ ಕರೆಯುತ್ತಾಳೆ. ಆದರೆ ಮಗುವಿನ ಗಮನವೆಲ್ಲ ಮೋಡಣ್ಣನ ಕಡೆಗೇ ಇದೆ. ಆದ್ದರಿಂದಲೇ ಕುವೆಂಪು ಅವರು ತಮ್ಮ 'ಕೂಸಿನ ಕನಸು' ಕವನದಲ್ಲಿ ಹಸುಗೂಸಿನ ಕನಸದು ಬಲು ಆಳ : ಅದಕ್ಕಿಲ್ಲವು ಆದ್ಯಂತ್ಯದ ಕಾಲ![೬] ಎಂದು ಹೇಳಿರುವುದು. ಮೋಡಣ್ಣನ ಅಗಲಿಕೆ ತಮ್ಮನಿಗೆ ಬೇಸರವನ್ನು ತಂದಿದೆ. ಲೌಕಿಕ ವ್ಯಾಪಾರಗಳು ಬಾಲಕನಿಗೆ ಆಕರ್ಷಿತವೆನಿಸುತ್ತಿಲ್ಲ. ಆದರೆ ಪ್ರಕೃತಿ ವ್ಯಾಪಾರಗಳು ಅವನಿಗೆ ಸೋಜಿಗವನ್ನೀಯುತ್ತಿವೆ. ಸದಾ ಮೋಡಣ್ಣನ ನೆನಪಿನಲ್ಲಿಯೇ ಇರುವ ಹುಡುಗ ಚಲಿಸುವ ಮೋಡದ ಕಡೆಗೇ ದೃಷ್ಟಿ ಹಾಯಿಸುತ್ತಿದ್ದಾನೆ. ತಮ್ಮನ ಮರೆಯದಿರಣ್ಣಾ ಎಂಬ ನೋವಿನ ಮಾತು ಮತ್ತೆ ಮತ್ತೆ ಪ್ರತಿಧ್ವನಿತಗೊಳ್ಳುತ್ತಿದೆ. ಮೋಡಣ್ಣನ ಬೀಳ್ಕೊಡುಗೆಯಿಂದ ಹುಡುಗ ಚಿಂತಾಕ್ರಾಂತನಾಗಿದ್ದಾನೆ.

ಸಾಮಾನ್ಯವಾಗಿ ಮಕ್ಕಳನ್ನು ದೃಷ್ಟಿಯಲ್ಲಿಟ್ಟುಕೊಂಡು ಬರೆದ ರಚನೆಗಳೆಲ್ಲವೂ ಕಥಾಮೂಲವಾಗಿರುತ್ತವೆ. ಆದರೆ 'ಮೋಡಣ್ಣನ ತಮ್ಮ'ವೆಂಬ ಸೃಜನಶೀಲ ರಚನೆ ಕಥಾವ್ಯಾಪ್ತಿಯಿಂದ ಹೊರಬಂದು ನೈತಿಕಾಂಶಗಳನ್ನು ಸಂವಹನಗೊಳಿಸುತ್ತಿದೆ. ಹಾಗೆಯೇ ಸಮಕಾಲೀನ ಸಂದರ್ಭಕ್ಕೆ ಬಹಳ ಯೋಗ್ಯವೆನಿಸುವ ವಿಚಾರಧಾರೆಯನ್ನು ವಿಶ್ಲೇಷಿಸುವುದರತ್ತ ಪ್ರಯತ್ನಿಸುವ ಉತ್ತಮ ಬರವಣಿಗೆಯೂ ಆಗಿದೆ.

## ೨

ದೈವ, ಮನುಷ್ಯ ಮತ್ತು ಪರಿಸರಗಳ ಅಭಿನ್ನತೆಯೇ 'ನನ್ನ ಗೋಪಾಲ' ನಾಟಕದ ವಸ್ತು. ತಾಯಿಯ ಮಮತೆ, ಭಗವಂತನ ಭಕ್ತಿ ಇಲ್ಲಿಯ ಪ್ರಧಾನ ನೆಲೆ. ಪರಿಶುದ್ಧವಾದ, ನಿರ್ಮಲವಾದ, ನಿರಾಡಂಬರವಾದ, ಸಹಜವಾದ ಭಕ್ತಿಗೆ ದೈವ ಒಲಿಯುತ್ತಾನೆಂಬ ತತ್ವ ಈ ನಾಟಕದಲ್ಲಿ ಗುಪ್ತಗಾಮಿನಿಯಾಗಿ ಹರಿದಿದೆ. ಈ ನಾಟಕದ ತಂತ್ರ ತುಂಬಾ ಪರಿಣಾಮಕಾರಿಯಾಗಿ ಇದೆ. ಇಲ್ಲಿ ಮೌಲ್ಯಗಳು ಬೋಧಪ್ರಧಾನವಾಗಿದ್ದು, ಭಕ್ತಿ ಭಾವವನ್ನು ಸಂವಹನಗೊಳಿಸುವಲ್ಲಿ ಶಕ್ತಿಯುತವಾಗಿವೆ. ಮಕ್ಕಳ ಅರಿವನ್ನು ಹೆಚ್ಚಿಸುವಲ್ಲಿ ಸಹಕಾರಿಯಾಗಿವೆ.

ಲೌಕಿಕ ಹಾಗೂ ಅಲೌಕಿಕ ನೆಲೆಗಳಲ್ಲಿ ನಡೆಯುವ ಈ ನಾಟಕ ಮಕ್ಕಳಲ್ಲಿ ಮಾನವೀಯ ಮೌಲ್ಯಗಳ ಬೆಳವಣಿಗೆ ಮತ್ತು ಆಧ್ಯಾತ್ಮದ ಬೆಳವಣಿಗೆಗೆ ಒತ್ತುಕೊಟ್ಟಿರುವುದನ್ನು ಕಾಣುತ್ತೇವೆ. ಹಿರಿಯರಾದ ಎ.ಆರ್. ಕೃಷ್ಣಶಾಸ್ತ್ರಿಗಳವರು ಗುರುತಿಸಿರುವಂತೆ

> "ಭಗವದ್ಗೀತೆ ಮತ್ತು ಭಾಗವತ ಎರಡರ ಸಾರಸರ್ವಸ್ವವನ್ನೂ ತನ್ನಲ್ಲಿ ಒಳಗೊಂಡಿರುವ ಒಂದು ಪುಟ್ಟ ಅನರ್ಘ್ಯ ರತ್ನ. ಕಣ್ಣೀರು ತುಂಬಿ ಅದನ್ನು ಓದಿದ್ದೇನೆ. ಮಡಿ ಮಾಡಿದ ಹತ್ತಿಯ ಬಟ್ಟೆಯಂತಹ ಅಂತರ್ನೈರ್ಮಲ್ಯವನ್ನು ಅನುಭವಿಸುತ್ತಿದೆ ನನ್ನ ಚೇತನ; ಸಾಧಾರಣವಾಗಿ ಜನ ನನ್ನನ್ನು ಕಲ್ಲು ಮನಸ್ಸಿನ

ಕಟುವ್ಯಕ್ತಿ ಎಂದು ಭಾವಿಸುತ್ತಾರೆ; ಆದರೆ, ನಂಬುತ್ತೀರೊ ಇಲ್ಲವೊ, ಅದನ್ನು ಓದಿದ ಮೇಲೆ ನನ್ನ ಹೃದಯ ಒಂದು ಊರ್ಧ್ವಮುಖವಾದ ಸ್ವರ್ಗೀಯ ರಸಾನಂದ ಸ್ರೋತದಲಿ ಮುಳುಗಿ ತೇಲಿಹೋಗುತ್ತಿರುವಂತಿದೆ. ಪರಿಣಾಮವಾಗಿ ಈವೊತ್ತು ಏನೊಂದೂ ನಿತ್ಯದ ನೀರಸ ಕರ್ತವ್ಯ ಕರ್ಮವನ್ನು ಮಾಡಲಾರದವನಾಗಿದ್ದೇನೆ. ಆಧ್ಯಾತ್ಮಕ್ಕೆ ಇಷ್ಟೊಂದು ಉಪಯುಕ್ತ ವಾಹಕವಾಗಿ ಸಾಹಿತ್ಯ ತಾನೆಂದೂ ಸೃಷ್ಟಿಯಾಗಿಲ್ಲ."[೮]

ಎ.ಆರ್. ಕೃಷ್ಣಶಾಸ್ತ್ರಿಗಳ ಈ ಮೇಲಿನ ಉದ್ಧರಣೆ ಓದುಗ ಮತ್ತು ನಾಟಕದ ಪ್ರೇಕ್ಷಕರ ಮೇಲೆ ಬೀರುವ ತೀವ್ರ ಪ್ರಭಾವ, ಪರಿಣಾಮಗಳನ್ನು ಪರಿಚಯಿಸುತ್ತದೆ. ಮೊದಲೇ ಹೇಳಿದಂತೆ ಲೌಕಿಕ ಅಲೌಕಿಕ ನೆಲೆಗಳಲ್ಲಿ ನಡೆಯುವ ಈ ಕಥನದಲ್ಲಿ ಕವಿ ಮಕ್ಕಳಲ್ಲಿ ಬೆಳೆಸಬೇಕಾದ ಉದಾತ್ತ ಮೌಲ್ಯಗಳನ್ನು ಅದರಲ್ಲಿಯೂ ಭಕ್ತಿ ಮತ್ತು ನಿಷ್ಠೆಯನ್ನು ಆಧುನಿಕ ವೈಚಾರಿಕತೆಯ ಮೂಶೆಯಲ್ಲಿ ನಾಟಕದುದ್ದಕ್ಕೂ ಹರಿಯಬಿಟ್ಟಿದ್ದಾರೆ. ಮುಗ್ಧ ಭಕ್ತಿಗೆ ಶಾಸ್ತ್ರಗಳ ಅರಿವಾಗಲೀ, ವೇದಗಳ ತಿಳಿವಾಗಲೀ ಅಗತ್ಯವಿಲ್ಲವೆಂದು, ಭಕ್ತಿಯೊಂದರ ಬಲದಿಂದಲೇ ಭಗವಂತನನ್ನು ಸಾಕ್ಷಾತ್ಕರಿಸಿಕೊಳ್ಳಬಲ್ಲ ನಿದರ್ಶನವನ್ನು ತಾಯಿ, ಗೋಪಾಲ, ಬನದ ಗೋಪಾಲ, ಗುರುವಿನ ಕಥನವೊಂದರ ಸುತ್ತ ಕಟ್ಟಿದ್ದಾರೆ. ಶ್ರೀಮಂತರು ದೇವರಿಗೆ ಅರ್ಪಿಸುವ ಸಿರಿಗಿಂತಲೂ ಬಡವಳೊಬ್ಬಳ ನೈಜ ಭಕ್ತಿಯೇ ದೈವಕ್ಕೆ ಪ್ರಿಯವಾದುದೆಂಬ ತತ್ವವನ್ನು ಇಲ್ಲಿ ಕಾಣಿಸಿದ್ದಾರೆ.

ಬಡವ ಮತ್ತು ಬಲ್ಲಿದರ ಭಕ್ತಿಯ ನೆಲೆಗಳನ್ನು ಮುಖಾಮುಖಿಯಾಗಿಸುವುದರ ಮೂಲಕ ನೈಜಭಕ್ತಿಯನ್ನು ಶೋಧಿಸುತ್ತಾರೆ. ನಾಟಕದ ನೋಟ ಎರಡರಲ್ಲಿ ಬರುವ ಬನದ ಗೋಪಾಲನ ಹಾಡಿನಲ್ಲಿಯೂ ಇಂತಹದೇ ವಿಚಾರವನ್ನು ಕಾಣುತ್ತೇವೆ.

ತಿಳಿವಳಿಕೆಗೆ ನಾ ಸಿಲುಕೇ ಮನುಜಾ
ಒಲುಮೆಗೆ ಸೆರೆಯಾಗುವೆನು
ತಪಸಿಗಳೆನ್ನನು ಜ್ಞಾನದಿ ಮುಟ್ಟಲು
ಯುಗಯುಗಗಳು ಬಲು ಬಳಲುವರು
ಯೋಗಿಗಳೆನ್ನನು ಜನುಮ ಜನುಮದಲಿ
ಹೊಂದಲು ಸಾಧನೆ ಮಾಡುವರು
ಕಡಲಿನ ಬಿತ್ತರ ಸಾಲದು ಪವಡಿಸೆ
ಭಕ್ತಿಯ ಕಂಬನಿ ಮನೆ ಎನಗೆ
ಹಿಮಗಿರಿ ಎತ್ತರ ಸಾಲದು ನಾನಿರೆ
ಭಕ್ತನ ಹೃದಯವು ಸಾಕೆನಗೆ
ಬೃಂದಾವನದಾ ಗೋಪಿಯರರಿತರೆ
ವೇದಗಳಾಡುವ ಸತ್ಯವನು?
ಹಾಲನು ಮಾರುವ ಹೆಣ್ಣುಗಳೊಲ್ಮೆಯಿ
ಮೀರದೆ ಯೋಗಿಯ ಸಾಧನೆಯು?[೯]

ತಪಸ್ವಿಗಳು ಯೋಗಿಗಳು ತಮ್ಮ ಯುಗಯುಗಗಳ ಜ್ಞಾನಸಾಧನೆಯಿಂದ ಪಡೆಯಲಾರದ್ದನ್ನು, ಕಾಣಲಾರದ್ದನ್ನು ಶ್ರೀಸಾಮಾನ್ಯರಾದ ತಾಯಿ ಮತ್ತು ಗೋಪಾಲ ತಮ್ಮ ಭಕ್ತಿಯ ಒಲುಮೆಯಿಂದಲೇ ಪಡೆಯಲು ಅರ್ಹರೆಂಬ ಮಾತನ್ನು ದೈವದ ಬಾಯಿಂದಲೇ ಹಾಡಿಸುತ್ತಾರೆ. ಕಡಲಿನ ವೈಶಾಲ್ಯತೆ, ಹಿಮಗಿರಿಯ ಎತ್ತರಗಳಿಗಿಂತ ಬಡವನೊಬ್ಬನ ಭಕ್ತಿಯ ಕಂಬನಿ ಹಾಗು ಭಕ್ತನ ಹೃದಯವೇ ದೈವವು ನೆಲೆಯೂರಲು ಸಾಕೆಂಬ ತತ್ವವನ್ನು ಕುವೆಂಪು ಅವರು ಇಲ್ಲಿ ಕಾಣಿಸುತ್ತಾರೆ. 'ಬೃಂದಾವನದಾ ಗೋಪಿಯರರಿತರೆ ವೇದಗಳಾಡುವ ಸತ್ಯವನು? ಹಾಲನು ಮಾರುವ ಹೆಣ್ಣುಗಳೊಲ್ಮೆಯೆ ಮೀರದೆ ಯೋಗಿಯ ಸಾಧನೆಯ?' ಈ ಪ್ರಶ್ನೆಗಳಲ್ಲಿನ ವೈದೃಶ್ಯಗಳಲ್ಲಿಯೂ ಹೊಸ ತತ್ವವೊಂದರ ಅನ್ವೇಷಣೆಯೇ ಮೈಪಡೆಯುತ್ತದೆ.

ಮಕ್ಕಳಲ್ಲಿ ಅಗತ್ಯವಾಗಿ ಬೆಳೆಯಲೇ ಬೇಕಾದ ಉದಾತ್ತ ಮೌಲ್ಯವಾದ ತಾಯಿಯ ಪ್ರೇಮ ಈ ದೃಶ್ಯ ನಾಟಕದಲ್ಲಿ ಮುಖ್ಯ ಆಯಾಮವಾಗಿ ಕಾಣಿಸುತ್ತದೆ. ಗುರುವಿನ ಮೂಲಕ ಹೊರಡುತ್ತಿರುವ ಈ ಬುದ್ಧಿ ಮಾತುಗಳು ಮಾನವೀಯ ಸಂಬಂಧಗಳನ್ನು ಗಟ್ಟಿಗೊಳಿಸಿಕೊಂಡು ಆ ಮೂಲಕ ಉತ್ತಮ ಆದರ್ಶಗಳನ್ನು ಬೆಳೆಸಿಕೊಳ್ಳುವ ಅತ್ಯುತ್ತಮ ಮೌಲ್ಯಗಳಾಗಿ ಕಾಣಿಸುತ್ತವೆ. ನಾಟಕದಲ್ಲಿನ ಅಂಥ ಒಂದು ಉದ್ಧರಣೆಯನ್ನು ಇಲ್ಲಿ ಉಲ್ಲೇಖಿಸುವುದು ಸೂಕ್ತವೆಂದು ಕಾಣುತ್ತದೆ.

> "ಮಕ್ಕಳು ದೇವರ ರಾಜ್ಯದ ಪ್ರಜೆಗಳು; ಹಾಗೆಯೆ ತಾಯಿ ದೇವರಿಗೆ ಸಮಾನ. ಈ ಪ್ರಪಂಚದಲ್ಲಿ ದೇವರ ಪ್ರೀತಿಯ ಮಹತ್ತು ತಾಯಿಯಾಗಿ ಮೈದೋರಿದೆ. ಆದ್ದರಿಂದಲೇ ತಾಯಿ ಮಕ್ಕಳಿಗಾಗಿ ತನ್ನ ಸರ್ವಸ್ವವನ್ನು ಮರೆತು ಅವರ ಯೋಗಕ್ಷೇಮವನ್ನೆ ಸದಾ ತನ್ನ ಹೃದಯ ಮಂದಿರದಲ್ಲಿ ಪ್ರತಿಷ್ಠೆ ಮಾಡಿ ಪೂಜಿಸುತ್ತಾಳೆ. ಮಕ್ಕಳೆಂದರೆ ತಾಯಿಗೆ ಜೀವ ; ಮಕ್ಕಳೇ ಅವಳ ಬಾಳಿಗೆ ಬಾಳು. ತಾಯಿಯ ಪ್ರೇಮದ ಶಕ್ತಿಯಿಂದಲೇ ಸೃಷ್ಟಿಚಕ್ರ ನಿಲ್ಲದೆ ತಿರುಗುತ್ತಿದೆ. ಜಗತ್ತಿನ ಆನಂದಕ್ಕೆ ತಾಯಿಯ ಪ್ರೇಮವೇ ಆಧಾರ. ತಾಯಿಯ ವಾತ್ಸಲ್ಯವನ್ನು ಅನುಭವಿಸದವನ ಬಾಳು ಬಾಳಲ್ಲ. ಅದು ವ್ಯರ್ಥ. ಆದ್ದರಿಂದಲೇ ಪ್ರೇಮನಿಧಿಯಾದ ಪರಮಾತ್ಮನನ್ನು ಜಗಜ್ಜನನಿಯೆಂಬ ಭಾವನೆಯಿಂದ ಆರಾಧಿಸುತ್ತಾರೆ. ಕಳ್ಳನಾಗಲಿ, ಠಕ್ಕನಾಗಲಿ, ವಿದ್ವಾಂಸನಾಗಲಿ, ಮಹಾಪುರುಷನಾಗಲಿ, ಪಟುಭಟನಾಗಲಿ, ಯಾರೇ ಆಗಲಿ ತಾಯಿಯ ಮುಂದೆ ಮಕ್ಕಳೇ ಹೊರತು ಕಳ್ಳನೂ ಅಲ್ಲ, ಠಕ್ಕನೂ ಅಲ್ಲ, ವಿದ್ವಾಂಸನೂ ಅಲ್ಲ, ಮಹಾಪುರುಷನೂ ಅಲ್ಲ, ಪಟುಭಟನೂ ಅಲ್ಲ. ಮಕ್ಕಳಿರಾ! ಹೆಚ್ಚೇನು? ತಾಯಿಗೂ ಪರಮಾತ್ಮನಿಗೂ ಯಾವ ಭೇದವೂ ಇಲ್ಲವೆಂದು ವೇದಗಳೇ ಸಾರುತ್ತಿವೆ. ಆದ್ದರಿಂದ ನೀವು ಯಾರೊಡನೆ ಹೇಗೆ ಬೇಕಾದರೂ ವರ್ತಿಸಿ, ತಾಯಿಯೊಡನೆ ಮಾತ್ರ ಮಕ್ಕಳಾಗಿರಿ. ಹಾಗಿರುವುದರಿಂದ ನಿಮಗೆ ಇಹಪರಗಳೆರಡರಲ್ಲಿಯೂ ಕಲ್ಯಾಣವುಂಟಾಗುತ್ತದೆ. ತಾಯಿಯ ಪ್ರೇಮವೇ ನಿಮ್ಮೆಲ್ಲರಾತ್ಮಗಳಿಗೆ ಜ್ಯೋತಿ, ಉತ್ಸಾಹ, ಆನಂದ, ಶಕ್ತಿ, ಮುಕ್ತಿ."[೧೦]

ಈ ಮೇಲಿನ ಮಾತುಗಳಲ್ಲಿ ತಾಯಿ ಮತ್ತು ದೈವಶಕ್ತಿಗಳೆರಡೂ ಒಂದೇ ಎನ್ನುವ ತತ್ವ ರೂಪುಗೊಳ್ಳುತ್ತಿದೆ. ತಾಯಿಯ ಪ್ರೀತಿ ಪ್ರೇಮಗಳು ನಿರಂತರವಾಗಿರುವಂತಹವು. ಹಾಗಾಗಿ ಹೆತ್ತ ತಾಯಿ ಮತ್ತು ದೈವ, ಭರತ ಮಾತೆ, ಕನ್ನಡಮಾತೆಗಳ ಬಗೆಗೂ ಮಕ್ಕಳೆಲ್ಲರೂ ಪ್ರೀತಿ, ಪ್ರೇಮ, ವಾತ್ಸಲ್ಯಗಳನ್ನು ತೋರಬೇಕೆಂದು ಈ ಮೇಲಿನ ಮಾತುಗಳು

ಧ್ವನಿಸುತ್ತವೆ. ಈ ಮೌಲ್ಯಗಳನ್ನು ಮೈಗೂಡಿಸಿಕೊಳ್ಳುವುದರಿಂದ ಇಹ ಮತ್ತು ಪರಗಳೆರಡರಲ್ಲಿಯೂ ಕಲ್ಯಾಣವನ್ನು ಪಡೆಯಬಹುದೆಂಬ ವಿಚಾರಧಾರೆಯನ್ನು ಎದುರಾಗಿಸುತ್ತದೆ.

ಬನದ ಗೋಪಾಲನು ಕೊಳಲೂದುತ್ತಾ ಗೋಪಾಲನನ್ನು ಎಲ್ಲಿಗೋ ಕರೆದೊಯ್ದ ಸಂದರ್ಭದಲ್ಲಿ ಗೋಪಾಲನು ಕಾಣುವ ಲೋಕವು ಆದರ್ಶ, ಆಧ್ಯಾತ್ಮ ಲೋಕದಂತಿರುತ್ತದೆ. ಪ್ರತಿಯೊಬ್ಬ ಮಗು, ವ್ಯಕ್ತಿ ಅಥವಾ ಭಕ್ತ ಕಾಣಲು ತಹತಹಿಸುವ ಲೋಕವದು. ಕಿಂದರಿಜೋಗಿ ಮಕ್ಕಳನ್ನು ಕರೆದೊಯ್ದ ಲೋಕವೂ ಇಂತಹದ್ದೇ.

> "ಅದು ಯಾವ ದೇಶವೋ ನನಗೆ ತಿಳಿಯದು. ಅಲ್ಲಿ ಹರಿಯುತ್ತಿದ್ದ ಒಂದು ಹೊಳೆ ನಿಂತು ಗಾನವನ್ನಾಲಿಸುತ್ತಿತ್ತು. ದನಗಳೂ ಹಾಗೆಯೇ ಕಲ್ಲು ಮರಗಳು ಕುಣಿದಾಡಿಬಿಟ್ಟವು. ಜಿಂಕೆಗಳ ಗುಂಪೊಂದು ಅಲ್ಲಿ ನಿಂತು ಕೊಳಲನ್ನು ಕೇಳುತ್ತಿತ್ತು. ಅಲ್ಲಿಯ ಬನಗಳು ಏನು ರಮಣೀಯವಾದವುಗಳಮ್ಮಾ! ಗೊಂಚಲು ಗೊಂಚಲಾಗಿ ಹಣ್ಣು ಹೂಗಳು ಜೋಲಾಡುತ್ತಿದ್ದವು. ಮಕರಂದವನ್ನು ಹೀರಲೆಂದು ಹಾರಾಡುತ್ತಿದ್ದ ತುಂಬಿಗಳ ಝೇಂಕಾರವಂತೂ ಆ ಬನದಲ್ಲೆಲ್ಲ ತುಂಬಿ ಹೋಗಿತ್ತು. ಏನಮ್ಮ : ಬಣ್ಣಬಣ್ಣದ ಹಕ್ಕಿಗಳು ! ತರತರದ ಮಧುರ ತಾನ! ಮಲಯದೆಲರು ತಳಿರ ನಡುವೆ ಮೆಲ್ಲಮೆಲ್ಲನೆ ಸುಳಿಸುಳಿದು ನಲಿದಾಡುತ್ತಿತ್ತು. ಹಸುರಂತೂ ಮೃದುವಾದ ಹಾಸಿಗೆಯಂತೆ ಹಬ್ಬಿಕೊಂಡು ಮುಗುಳು ನಗೆಯನ್ನು ಹೊರಸೂಸುತ್ತಿತ್ತು. ಅಮ್ಮ ಅಲ್ಲಲ್ಲಿ ಬಣ್ಣದ ಬಟ್ಟೆಗಳನ್ನುಟ್ಟುಕೊಂಡು ಬಣ್ಣದ ಹೂಗಳನ್ನು ಮುಡಿದುಕೊಂಡು ಸಡಗರದಿಂದ ತಿರುಗಾಡುವ, ಓಡುವ, ಹಾಡುವ ದಿವ್ಯ ಮೂರ್ತಿಗಳನ್ನೂ ನೋಡಿದೆ. ಅಮ್ಮ ಅಲ್ಲಿಂದ ಬರುವುದಕ್ಕೇ ನನಗೆ ಮನಸ್ಸಿರಲಿಲ್ಲ. ಆದರೆ ನನ್ನಣ್ಣ ಎಳೆದುಕೊಂಡು ಬಂದ."[೧೧]

ಕಾಲ ದೇಶಗಳನ್ನು ಮೀರಿದ ಆಧ್ಯಾತ್ಮ ಲೋಕದ ಚಿತ್ರವನ್ನು ಈ ಮೇಲಿನ ಉದ್ಧರಣೆಯಲ್ಲಿ ಕಾಣುತ್ತೇವೆ. ತಾಯಿಯ ಮೇಲಿನ ಪ್ರೀತಿಯಂತೆಯೇ ಗುರುವಿನ ಪ್ರೀತಿಯ ಮಹತ್ವವನ್ನು ಒಂದು ಮುಖ್ಯ ಮೌಲ್ಯವಾಗಿ ಈ ನಾಟಕ ನಿವೇದಿಸುತ್ತದೆ. 'ಗುರುಗಳ ಆಶೀರ್ವಾದ ಪರಮಾತ್ಮನ ಆಶೀರ್ವಾದಕ್ಕಿಂತಲೂ ಕಡಿಮೆಯಾದುದಲ್ಲ. ಅವರ ಕೃಪೆ ನಿನ್ನ ಮೇಲೆ ಇರಬೇಕು. ಗುರುವೇ ಬ್ರಹ್ಮ, ಗುರುವೇ ವಿಷ್ಣು, ಗುರುವೇ ಸಾಕ್ಷಾತ್ ಪರಮೇಶ್ವರ'[೧೨] ಎಂದು ಗುರುವನ್ನು ಭಕ್ತಿಯಿಂದ ಪೂಜಿಸುವುದು ದೇವರಿಗೆ ಪ್ರಿಯವಾದುದೆಂಬ ವಿಚಾರವನ್ನು ಗಂಭೀರ ಮೌಲ್ಯವಾಗಿ ಈ ದೃಶ್ಯದಲ್ಲಿ ಪರಿಗಣಿಸಲಾಗಿದೆ.

**ಅಡಿಟಿಪ್ಪಣಿ :**

೧. ಕುವೆಂಪು, ನೆನಪಿನ ದೋಣಿಯಲ್ಲಿ ೧, ಸಹ್ಯಾದ್ರಿ ಪ್ರಕಾಶನ, ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು, ೧೯೮೦, ಪು. ೬೫೧

೨. ಕುವೆಂಪು, ಮೋಡಣ್ಣನ ತಮ್ಮ, ಉದಯರವಿ ಪ್ರಕಾಶನ, ಮೈಸೂರು, ೧೯೬೨, ಪು. ೩

೩. – ಅದೇ –, ಪುಟ–೫

೪. – ಅದೇ –, ಪುಟ–೮

೫. – ಅದೇ –, ಪು–೮

೬. – ಅದೇ –, ಪು–೧೨

೭. ಕೃಷ್ಣಕುಮಾರ್ ಸಿ.ಪಿ. (ಸಂ), ಆಯ್ದ ಕುವೆಂಪು ಕವನಗಳು, ಬಾಪ್ಕೋ ಪ್ರಕಾಶನ, ಬೆಂಗಳೂರು, ೧೯೮೪, ಪು. ೩೮.

೮. ಕುವೆಂಪು, ನನ್ನ ಗೋಪಾಲ, ಉದಯರವಿ ಪ್ರಕಾಶನ, ಮೈಸೂರು, ೧೯೯೮, ಪು - ೩೪.

೯. – ಅದೇ –, ಪು - ೭-೮

೧೦. – ಅದೇ –, ಪು - ೨೦

೧೧. – ಅದೇ –, ಪು - ೨೩

೧೨. – ಅದೇ –, ಪು - ೨೩

* * *

## ೧೦. ವಿಶ್ವಮಾನವ ಸಂದೇಶ ಹಾಗೂ ಮಕ್ಕಳ ಶಿಕ್ಷಣ (ಅನಿಕೇತನ ಪ್ರಜ್ಞೆ)

ಸಾಹಿತ್ಯದ ಮೂಲಕವೇ ಮಕ್ಕಳಿಗೆ ಶಿಕ್ಷಣವನ್ನು ಕೊಡಬಹುದೆಂಬ ದೃಢವಾದ ನಂಬಿಕೆ ಕುವೆಂಪು ಅವರದಾಗಿತ್ತು ಎಂಬುದು ಅವರ ಸಾಹಿತ್ಯಾವಲೋಕನದಿಂದ ತಿಳಿದು ಬರುವ ಸಂಗತಿ. ಸಾಹಿತ್ಯ ಜನಜೀವನವನ್ನು ಎಚ್ಚರಿಸುವ ತೂರ್ಯ ಧ್ವನಿಯಾಗಿ ಕೆಲಸ ಮಾಡುತ್ತದೆ ಎಂದು ಅವರು ಗಾಢವಾಗಿ ನಂಬಿದ್ದರು. ಸಾಹಿತ್ಯ ಜನಜೀವನದ ಇಂದಿನ ಸ್ಥಿತಿಯನ್ನು ವರ್ಣಿಸಿ ಮುಂದಿನ ಗತಿಯನ್ನು ನಿರ್ಣಯಿಸುತ್ತದೆ ಎಂದು ಕೃತವಿದ್ಯರಾದ ಯುವಕರು ತಮ್ಮ ಆಸೆ ಆಕಾಂಕ್ಷೆಗಳನ್ನು ಬರೆದು ಓದಿ ಮತ್ತೆ ಮತ್ತೆ ಹೇಳಿ, ಜನರ ಹೃದಯಗಳಲ್ಲಿ ಕಿಡಿಗಳನ್ನು ಭಿತ್ತಿ, ನಾಡಿನ ಜೀವನ ಕೃತ್ತಿಕಾ ದೀಪೋತ್ಸವದಂತೆ ಸಾವಿರಾರು ಸೊಡರ್ಮಾಲೆಗಳಾಗಿ ಕಂಗೊಳಿಸಬೇಕೆಂಬ ಮಹದಾಸೆಯು ಅವರದಾಗಿತ್ತು. ಜೀವನದಲ್ಲಿ ಪ್ರತಿಯೊಬ್ಬರು ಮುಂದುವರಿಯಬೇಕಾದರೆ ತಮ್ಮ ಹೃದಯದಲ್ಲಿ ಒಂದು ಶಕ್ತಿಯ ನಿಧಿಯನ್ನು ಶೇಖರಿಸುತ್ತಾ, ಆತ್ಮವನ್ನು ಓಜಸ್ವಿಗೊಳಿಸಿಕೊಳ್ಳುತ್ತಾ, ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ, ದರ್ಶನ, ದ್ರಷ್ಟಾರರಾಗಬೇಕೆಂಬ ಕಾಣ್ಕೆ ಅವರದು. ಹಾಗಾಗಿ ವಿದ್ಯಾರ್ಥಿಯ ಶಿಕ್ಷಣದ ಸಂದರ್ಭದಲ್ಲಿ ಜೀವನವು ಒಂದು ತಪಸ್ಸಾಧನೆ, ಪ್ರತಿಯೊಬ್ಬ ವಿದ್ಯಾರ್ಥಿಯನ್ನು ಅವರು ಗೌರವ ತಪಸ್ವಿಯೆಂದು ಭಾವಿಸಿದ್ದರು. ವಿದ್ಯಾರ್ಜನೆಯ ಸಮಯವೆಂದರೆ ಆತ್ಮಶಕ್ತಿ ಸಂಗ್ರಹದ ಕಾಲವೆಂದು, ಆ ಕಾಲದಲ್ಲಿ ಬುದ್ಧಿಯನ್ನು ಮಸೆದು, ಭಾವಗಳನ್ನು ಕಡೆದು ಸಾಹಿತ್ಯ ಮತ್ತು ತತ್ವಜ್ಞರ ದರ್ಶನಗಳಲ್ಲಿ ದೇವತೆಯನ್ನು ರಚಿಸಿ, ಆಕೆಯನ್ನು ಮನೋಮಂದಿರದಲ್ಲಿ ಸ್ಥಾಪಿಸಲು ಕಂಕಣಬದ್ಧರಾಗಿರುವ ಇಚ್ಛಾಶಕ್ತಿ ಹಾಗೂ ಶಕ್ತಿಶಾಲಿಗಳಾಗಬೇಕೆಂದು ಬಯಸಿದ್ದರು. ಅಂಥ ಇಚ್ಛಾಶಕ್ತಿ ಮತ್ತು ಶಕ್ತಿಯ ಸಂಗ್ರಹವನ್ನು ಪಡೆಯಲು ಸುಲಭೋಪಾಯಗಳಿಲ್ಲವೆಂಬುದು ಅವರ ಗ್ರಹಿಕೆಯಾಗಿತ್ತು.

> ..... ಉಳದೆ, ಬಿತ್ತದೆ, ಬೆಳೆಯದೆ ಪೈರು ಕೊಯ್ಲಿಗೆ ಬರುವುದಿಲ್ಲ. ಬೆವರು ಸುರಿಸದೆ ಸಿರಿ ಕೈ ಸೇರುವುದಿಲ್ಲ. ವಿದ್ಯೆಯ ಲೋಕದಲ್ಲಿ ಧನಿಕರಾಗಲು ಸುಲಭೋಪಾಯಗಳಿಲ್ಲ. ಅಲ್ಲಿ ಯಾರೂ ವಂಚನೆಯಿಂದ ಸಂಪತ್ತು ಗಳಿಸಲಾರರು. ಅಲ್ಲಿ ದುಡಿಮೆಯಂತೆ ಪಡಿ. ಅಲ್ಲಿ ಕಳ್ಳರುಜುಗಳಿಗೂ ಸುಳ್ಳು ಪತ್ರಗಳಿಗೂ ಚಿರಂಜೀವವಿಲ್ಲ.
>
> ..... ಪ್ರೀತಿಯ ಪುಸ್ತಕಗಳನ್ನು ಕೊಂಡುಕೊಳ್ಳುವುದಕ್ಕಾಗಿ ಹಸಿದಿರಬೇಕಾಗುತ್ತದೆ; ಅವುಗಳನ್ನೋದಿ ಜಯಿಸುವುದಕ್ಕಾಗಿ ನಿದ್ದೆಗೆಡಬೇಕಾಗುತ್ತದೆ; ಬೆವರು ಸುರಿಸಬೇಕಾಗುತ್ತದೆ; ಎಣ್ಣೆ ಉರಿಸಬೇಕಾಗುತ್ತದೆ; ಎಷ್ಟೋ ಮನರಂಜನೆಗಳನ್ನೂ ತ್ಯಾಗಮಾಡಿ ಅಧ್ಯಯನ ತಪಸ್ಸಿನಲ್ಲಿ ಮಗ್ನವಾಗಬೇಕಾಗುತ್ತದೆ. ವ್ಯಾಕರಣದ ನೀರಸತೆಯನ್ನು ಸಹಿಸಿ, ನಿಘಂಟುವಿನ ಹೇರಡವಿಯಲ್ಲಿ

ಬೇಸರಗೊಳ್ಳದೆ ತೊಳಲಿ, ಟೀಕೆ ಟಿಪ್ಪಣಿ ವಿಮರ್ಶೆ ವ್ಯಾಖ್ಯಾನಗಳನ್ನು ತಡಕಿ ಹುಡುಕಿ ಸಂಗ್ರಹಿಸಬೇಕಾಗುತ್ತದೆ. ಇಷ್ಟನ್ನೂ ಹಲ್ಲು ಕಚ್ಚಿಕೊಂಡು ದೃಢಮನಸ್ಸಿನಿಂದ ಸಾಧಿಸುವ ಮತಿಗೌರವವಿಲ್ಲದಿದ್ದರೆ, ಸಾಮಾನ್ಯ ಬುದ್ಧಿಯ ಮಾತಂತಿರಲಿ, ಪ್ರತಿಭೆಯೂ ಕೂಡ, ಮರಳು ಗಾಡಿನಲ್ಲಿ ಅರತು ಹೋಗುವ ಮಹಾನದಿಯಂತೆ, ಕೃಷಿಯಿಲ್ಲದೆ ಕೃಶವಾಗಿ ವ್ಯರ್ಥವಾಗುತ್ತದೆ.[೧]

ಈ ಮೇಲಿನ ಉದ್ಧರಣೆಯಲ್ಲಿ ಪ್ರತಿಯೊಬ್ಬನಿಗೂ ಸಾಹಿತ್ಯದ ಮೂಲಕ ದೊರೆಯುವ ಶಿಕ್ಷಣದ ಪ್ರಕ್ರಿಯೆಯನ್ನು ಕಾಣುತ್ತೇವೆ. ಇಂತಹ ಮಹತ್ವದ ಧೋರಣೆಯಿಂದಲೇ ಕುವೆಂಪು ಅವರ ಒಟ್ಟು ಸಾಹಿತ್ಯಾಭಿವ್ಯಕ್ತಿ ಪ್ರಕಟಗೊಂಡಿದೆ ಎಂಬ ದೃಢ ವಾದ ನನ್ನದು. ಅವರ ಅಖಂಡ ಸಾಹಿತ್ಯದ ಬೀಜರೂಪದಂತಿರುವ ವಿಶ್ವಮಾನವ ಸಂದೇಶ ಮತ್ತು ಅದರಿಂದ ವ್ಯಕ್ತವಾಗುವ ಸಂದೇಶ ಅವರ ಶಿಕ್ಷಣ ತತ್ವವನ್ನೇ ಕಾಣಿಸುತ್ತದೆ.

ಶಿಕ್ಷಣ ಪ್ರತಿಯೊಬ್ಬರ ವ್ಯಕ್ತಿತ್ವ ನಿರ್ಮಾಣದಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಆದ್ದರಿಂದ ಕುವೆಂಪು ಅವರು ತಮ್ಮ ವಿಶ್ವಮಾನವ ಸಂದೇಶದಲ್ಲಿ ವಿದ್ಯೆ ಮತ್ತು ಶಿಕ್ಷಣದ ಮಹತ್ವವನ್ನು ಹೇಳಿದ್ದಾರೆ. ಹುಟ್ಟುತ್ತಲೇ ವಿಶ್ವಮಾನವನಾಗಿರುವ ಮಗು ಸುತ್ತಣ ಸಂಸ್ಕೃತಿಯ ನಿರರ್ಥಕ ಪ್ರಭಾವ, ಪ್ರೇರಣೆಗಳಿಂದ ಅಲ್ಪಮಾನವನಾಗಲು ಸಿದ್ಧಗೊಳ್ಳುತ್ತಿರುತ್ತದೆ. ಇಂಥ ಮಗುವನ್ನು 'ವಿಶ್ವಮಾನವ'ನನ್ನಾಗಿ ಮಾಡಲು ವಿದ್ಯೆ, ಸಂಸ್ಕೃತಿ, ನಾಗರೀಕತೆಗಳು ಮುಂಬರಬೇಕು ಎಂಬುದು ಕುವೆಂಪು ಅವರ ಬಯಕೆ, ದೇಶ, ಭಾಷೆ, ಜಾತಿ, ಮತ, ಜನಾಂಗ, ವರ್ಣಗಳನ್ನು ಮೀರಿ ವಿಶ್ವಮಾನವನಾಗುವ ಕಡೆ ನಮ್ಮ ಗುರಿಯಿರಬೇಕೆಂದು ಹೇಳುತ್ತಾರೆ. ಅಂತೆಯೇ ವಿಶ್ವದ ಎಲ್ಲಾ ಮಕ್ಕಳು 'ಅನಿಕೇತನ'ರಾಗಬೇಕೆಂದು ಮುಗ್ಧ ಚೇತನಗಳನ್ನು ಎಚ್ಚರಿಸುತ್ತಿದ್ದಾರೆ. ವಿಶ್ವಮಾನವನಾಗಲು ವಿಶ್ವವಿದ್ಯೆ, ವಿಶ್ವಪ್ರಜ್ಞೆ ಹಾಗೂ ವಿಶ್ವ ಮೈತ್ರಿಗಳು ಹೇಗೆ ಸಹಕಾರಿಯಾಗುತ್ತವೆ ಎಂಬುದನ್ನು ಅವರ ಈ ಕೆಳಗಿನ ಮಾತುಗಳು ಸ್ಪಷ್ಟಪಡಿಸುತ್ತವೆ.

> ವಿಶ್ವವಿದ್ಯೆ ನಮಗೆ ಬರಬೇಕು. ಆ ವಿದ್ಯೆಯಿಂದ ವಿಶ್ವಪ್ರಜ್ಞೆ ಉಂಟಾಗಬೇಕು. ಜಗತ್ತೆಲ್ಲಾ ಒಂದಾಗುತ್ತಿರುವ ಈ ಸಮಯದಲ್ಲಿ, ಯುದ್ಧವನ್ನು ಯಾವ ದೇಶವಾದರೂ ಬಯಸಿದರೆ ಎಲ್ಲಾ ದೇಶಗಳೂ ಸರ್ವನಾಶವಾಗುವ ಈ ಸಮಯದಲ್ಲಿ, ಈ ವಿಶ್ವವಿದ್ಯೆ ಅದರಿಂದ ಉಂಟಾಗುವ ವಿಶ್ವಪ್ರಜ್ಞೆ, ಅದರಿಂದ ಉಂಟಾಗುವ ವಿಶ್ವಮೈತ್ರಿ - ಇದು ಎಲ್ಲದಕ್ಕಿಂತಲೂ ಅತ್ಯಂತ ಅವಶ್ಯಕವಾಗಿದೆ. ಎಲ್ಲ ಶಕ್ತಿಗಳಿಗಿಂತಲೂ ಅತ್ಯಂತ ಅವಶ್ಯಕವಾಗಿರುವ ಶಕ್ತಿ, ನಮ್ಮ ಪ್ರಪಂಚವನ್ನು ಬದುಕಿಸುವ ಶಕ್ತಿ ವಿಶ್ವಮೈತ್ರಿ. ಈ ವಿಶ್ವವಿದ್ಯೆಯಿಂದ ವಿಶ್ವಪ್ರಜ್ಞೆ, ಅದರಿಂದ ಈ ವಿಶ್ವಮೈತ್ರಿ. ಅಂಥ ವಿಶ್ವಮೈತ್ರಿಯನ್ನು ಪಡೆದ ಮಾನವ ವಿಶ್ವಮಾನವ.[೨]

ಎಂದು ವಿದ್ಯೆಯ ಮಹತ್ವವನ್ನು ವಿಶ್ವಮಟ್ಟಕ್ಕೆ ಏರಿಸುತ್ತಿದ್ದಾರೆ. ಇಂತಹ ಉನ್ನತ ಮತ್ತು ಉತ್ತಮ ಮೌಲ್ಯಗಳು ಸಾರ್ವಕಾಲಿಕ ಮೌಲ್ಯಗಳಾಗಬೇಕಾಗಿದೆ. ಇವು ಸಂಕುಚಿತ ಮನೋಭಾವನೆಗಳನ್ನು ಮತ್ತು ಕ್ರೂರ ವರ್ತನೆಗಳನ್ನು ದೂರೀಕರಿಸಿ ಪ್ರೀತಿ, ಸ್ನೇಹ, ವಿಶ್ವಾಸಗಳನ್ನು ಸ್ಥಾಪಿಸುವಂತಹ ಪ್ರಜ್ಞೆಗಳನ್ನು ರೂಪಿಸಬೇಕಾಗುತ್ತದೆ. ಪ್ರತಿಯೊಂದು ಮಗುವೂ ಕಲಿಯುವ ವಿದ್ಯೆ, ಅದರ ವ್ಯಕ್ತಿತ್ವವನ್ನು ಉನ್ನತ ಮಟ್ಟದಲ್ಲಿ ರೂಪಿಸಿಕೊಳ್ಳುವುದಕ್ಕೆ ಸಹಕಾರಿಯಾಗಬೇಕು. ಲೋಕದಲ್ಲಿ ಬೇರೂರಿರುವ ಎಲ್ಲಾ ಅಸಮಾನತೆಗಳನ್ನು ತೊಡೆದುಹಾಕುವಂತಹ ಶಕ್ತಿ, ಸಾಮರ್ಥ್ಯ ಆ ಶಿಕ್ಷಣಕ್ಕಿರಬೇಕಾಗುತ್ತದೆ. ಅಂತಹ ಶಿಕ್ಷಣದಿಂದಲೇ ಇಂದಿನ ಮಕ್ಕಳು ನಾಳಿನ ಪ್ರಜೆಗಳಾಗಿ ದೇಶವನ್ನು ಮುಂಚೂಣಿಗೆ ತರುತ್ತಾರೆ. ಸುಭಿಕ್ಷ ದೇಶವನ್ನಾಗಿ ಮಾಡುತ್ತಾರೆ. ಇದೇ ವಿಶ್ವಮಾನವತೆಯ ಪ್ರಧಾನ ಲಕ್ಷಣವಾಗಬೇಕು.

ಜಾತಿ, ಧರ್ಮ, ವರ್ಣ, ವರ್ಗ, ಮತ, ಮೌಢ್ಯಗಳು ಆಳವಾಗಿ ಬೇರೂರಿರುವ ಈ ಹೊತ್ತಿನಲ್ಲಿ ಪಂಚಮಂತ್ರ, ಸಪ್ತಸೂತ್ರ, ವಿಜ್ಞಾನ, ವೈಚಾರಿಕತೆಗಳ ಅಗತ್ಯತೆ ಹೆಚ್ಚು ಅವಶ್ಯಕವೆನಿಸುತ್ತದೆ. ಜಾತಿ ವೈಷಮ್ಯಗಳು ವಿಷಮಸ್ಥಿತಿಗೇರುತ್ತಿರುವ ಪ್ರಸ್ತುತ ಸನ್ನಿವೇಶದಲ್ಲಿ ವಿಶ್ವಮಾನವ ಗೀತೆಯು ಎಲ್ಲಾ ಯುವ ಚೇತನಗಳನ್ನು ಅಂತ್ಯವೇ ಇಲ್ಲದ ಅನಂತ ಚೇತನಗಳಾಗಿ ರೂಪಿಸಲು ಮುಂದುವರೆದಿದೆ. ಅನಂತ ಚೇತನಗಳಾಗಲು ಸ್ವತಃ ಕುವೆಂಪು ಅವರೇ ಕಟ್ಟಿಕೊಡುವ ಭೂಮಿಕೆ ಯಾವ ನೆಲೆಯದ್ದು ಎನ್ನುವುದನ್ನು ಅವರ ಮಾತುಗಳ ಮೂಲಕವೇ ಕೇಳೋಣ.

> ಯಾವ ಭಾವನೆಗಳು ಜಗತ್ತಿನಲ್ಲಿ ಎಲ್ಲ ಮಾನವರಿಗೂ ಅನ್ವಯವಾಗಬಹುದೊ ಅಂತಹ ಭಾವನೆ ಅಂತಹ ದೃಷ್ಟಿ ಬರಿಯ ಯಾವುದೊ ಒಂದು ಜಾತಿಗೆ, ಮತಕ್ಕೆ, ಗುಂಪಿಗೆ, ಒಂದು ದೇಶಕ್ಕೆ ಮಾತ್ರ ಅನ್ವಯವಾಗುವುದಿಲ್ಲ. ಸರ್ವಕಾಲಕ್ಕೂ ಅನ್ವಯವಾಗುವ ಇವು ಮೂಲಮೌಲ್ಯಗಳು. ಈ ಮೌಲ್ಯಗಳು ಮಾನವರನ್ನು ಕೂಡಿಸಿ ಬಾಳಿಸುವತ್ತ ನಡೆದಾವು. ಗುಂಪುಗಾರಿಕೆಗೆಂದೂ ಇವು ತೊಡಗುವುದಿಲ್ಲ. ಅದೇನಿದ್ದರೂ ರಾಜಕೀಯದ ಕರ್ಮ. ವ್ಯಕ್ತಿ ಸ್ವಾತಂತ್ರ್ಯವನ್ನು ನೀಡಿಯೂ ಸಮಷ್ಟಿಯ ಉದ್ಧಾರದ ದೃಷ್ಟಿ ಇದರದು. ಈ ದೃಷ್ಟಿಗೆ ವ್ಯಕ್ತಿಗಳೆಷ್ಟೊ ಅಷ್ಟೂ ಸಂಖ್ಯೆಯ ಮತಗಳಿರುವುದು ಸಾಧ್ಯ. ಅಷ್ಟೂ ವ್ಯಕ್ತಿಗಳು ಸಮಷ್ಟಿಯ ವಿಕಾಸಕ್ಕೆ ಸಾಧಕವಾಗುವುದೂ ಸಾಧ್ಯ. ಈ 'ದರ್ಶನ'ವನ್ನೆ 'ವಿಶ್ವಮಾನವ ಗೀತೆ' ಸಾರುತ್ತದೆ.[೩]

ಮುಗ್ಧ ಚೇತನಗಳೆಲ್ಲವೂ ಅನಿಕೇತನಗಳಾಗಿ ಅಲ್ಪತೆಯನ್ನು ತೊರೆದು, ಮಹತಾದ್ದದನ್ನು ದರ್ಶಿಸಿ, ಮಹತಾದ್ದದನ್ನು ಸಾಧಿಸಲು ವಿಶ್ವಮಾನವ ಗೀತೆ ಹೆಚ್ಚು ಸಹಕಾರಿಯಾಗುತ್ತದೆ.

ಶಿಕ್ಷಣ, ಮನುಜಮತ, ವಿಶ್ವಪಥ, ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿಗಳು ಹೇಗೆ ಮೂಲ ಮೌಲ್ಯಗಳಾಗಿವೆಯೋ ಅಂತೆಯೇ ಸಪ್ತಸೂತ್ರಗಳು ಕೂಡ ಮೂಲ ಮೌಲ್ಯಗಳಾಗಿವೆ. ಆದರೆ ಇವನ್ನು ನಿರಂತರವಾಗಿ ರೂಢಿಸಿಕೊಳ್ಳಬೇಕಾಗಿರುವ ಪರಿಸರ ನಿರ್ಮಾಣವಾಗಬೇಕಾಗಿದೆ. ಮೂಲತಃ ಸಮಾಜ ಶ್ರೇಣೀಕರಣದಿಂದ ಮುಕ್ತವಾಗಬೇಕು. ಮೇಲು - ಕೀಳು, ಬಡವ - ಶ್ರೀಮಂತ ಎಂಬ ಭಾವನೆಗಳು ನಶಿಸಿಹೋಗಿ ಕೇವಲ ಮಾನವ ಜಾತಿಯೊಂದೇ ಅತ್ಯುತ್ತಮ ಮೌಲ್ಯವಾಗಿ ಪರಿವರ್ತಿತವಾಗಬೇಕಾಗಿದೆ. ಅಸಂಖ್ಯ ರೂಪಗಳಲ್ಲಿ ಕಾಣಿಸುತ್ತಿರುವ ಜಾತಿ ವ್ಯವಸ್ಥೆಗಳು ನಿರ್ನಾಮಗೊಂಡು ಸಮಾನತೆ, ಸೌಹಾರ್ದತೆಗಳು ಸ್ಥಾಪಿತವಾಗಬೇಕು. ಇಡೀ ವಿಶ್ವವೇ ಜಾತಿ ಮತಗಳೆಂಬ ಕೂಪದಿಂದ ಹೊರಬರಬೇಕು. ಮತವೆಂಬುದು ನಾಶಗೊಂಡು ಅಧ್ಯಾತ್ಮ ಮತ್ತು ವೈಜ್ಞಾನಿಕತೆಗಳು ಶಾಶ್ವತವಾದ ಸ್ಥಾನವನ್ನು ಗಳಿಸಿಕೊಳ್ಳಬೇಕು. ಮತ ಮನುಜ ಮತವಾಗಿ, ಪಥ ವಿಶ್ವಪಥವಾಗಿ, ಮನುಷ್ಯ ವಿಶ್ವಮಾನವನಾಗಿ ಬೆಳಕನ್ನು ಕಾಣಬೇಕು. ಸ್ವತಃ ಮನುಷ್ಯನೇ ರೂಪಿಸುವ ಮತ ಯಾವ ಗುಂಪು ಘರ್ಷಣೆಗೆ ಅವಕಾಶ ಮಾಡಿಕೊಡದೆ ತನ್ನತನವನ್ನು ಬೆಳೆಸುವತ್ತ ಮುನ್ನಡೆಯಬೇಕು. ಸ್ವಶಕ್ತಿಯಿಂದ ಪಡೆದುಕೊಂಡ ಜ್ಞಾನದ ಮೂಲಕ ಯಾವುದೇ ವ್ಯಕ್ತಿ ಪೂರ್ಣದರ್ಶನವನ್ನು ಕಂಡುಕೊಳ್ಳುವಂತಾಗಬೇಕು. ಇವು ಸಪ್ತಸೂತ್ರಗಳು ಹೊರಡಿಸುವ ಸತ್ಯಗಳಾಗಿವೆ. ಇಂತಹ ಸತ್ಯಗಳು ಪ್ರತಿಯೊಂದು ಮಗುವಿನ ಜೀವನದಲ್ಲಿ ನಿತ್ಯ ಸತ್ಯಗಳಾಗಬೇಕು. ಆಗಲೇ ಆ ಚೇತನ ಅಂತ್ಯವೇ ಇಲ್ಲದ ಸ್ಥಿತಿಯನ್ನು ತಲುಪಿ ಪೂರ್ಣತ್ವ ಮತ್ತು ಶಾಶ್ವತತೆಗಳನ್ನು ಪಡೆದುಕೊಳ್ಳುತ್ತದೆ.

**ಅಡಿಟಿಪ್ಪಣಿ :**

೧. ಶಿವಾರೆಡ್ಡಿ ಕೆ.ಸಿ. (ಸಂ), ಕುವೆಂಪು ಸಮಗ್ರ ಗದ್ಯ, ಸಂಪುಟ - ೨, ಪ್ರಸಾರಾಂಗ, ಕ.ವಿ.ವಿ., ಹಂಪಿ, ೨೦೦೪, ಪು. ೯೪-೯೫

೨. ಅದೇ, ಪು. ೧೭೭

೩. ಕುವೆಂಪು, ಪಂಚಮಂತ್ರ ಮತ್ತು ಸಪ್ತಸೂತ್ರ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು. ೩

* * *

# ಉಪಸಂಹಾರ

ಕನ್ನಡದಲ್ಲಿ ಮಕ್ಕಳ ಸಾಹಿತ್ಯದ ರಚನೆ ವಿಪುಲವಾಗಿ ನಡೆದಿದೆಯಾದರೂ ಅಂಥ ಸಾಹಿತ್ಯವನ್ನು ಕುರಿತ ಚರ್ಚೆ ವಿಮರ್ಶೆಗಳು ದೊಡ್ಡ ಪ್ರಮಾಣದಲ್ಲಿ ನಡೆದಿಲ್ಲ. ಅಲ್ಪಸ್ವಲ್ಪ ಮಟ್ಟಿಗೆ ಅಲ್ಲಲ್ಲಿ ಮಕ್ಕಳ ಸಾಹಿತ್ಯ ಕುರಿತ ಲೇಖನಗಳು, ವಿಚಾರ ಸಂಕಿರಣಗಳಲ್ಲಿ ಮಂಡಿತವಾದ ಪ್ರಬಂಧಗಳು ಮೊದಲಾದ ಬರಹಗಳು ಪ್ರಕಟಗೊಂಡಿದ್ದರೂ ಕನ್ನಡದಲ್ಲಿ ಮಕ್ಕಳ ಸಾಹಿತ್ಯದ ಧ್ಯೇಯ ಧೋರಣೆಗಳನ್ನು ಗುರುತಿಸುವ ಅಧ್ಯಯನಗಳು ಇನ್ನೂ ನಡೆಯಬೇಕಾಗಿದೆ. ಕನ್ನಡ ಮಕ್ಕಳ ಸಾಹಿತ್ಯ ನಡೆದು ಬಂದ ಬಗೆ, ಆ ಸಾಹಿತ್ಯ ಅಭಿವ್ಯಕ್ತಿಸಿದ ಜೀವನ ಮೌಲ್ಯಗಳ ಪ್ರಭಾವ, ಪರಿಣಾಮವನ್ನು ಕುರಿತ ಅಧ್ಯಯನಗಳು ಹೊರಬರಬೇಕಾಗಿದೆ.

ಮಕ್ಕಳಿಗಾಗಿ ಪ್ರಕಟವಾಗುವ ಸಾಹಿತ್ಯವನ್ನು ವಿಮರ್ಶಾವಿವೇಕ ಮುಖ್ಯ ನೆಲೆಯನ್ನಾಗಿ ಸ್ವೀಕರಿಸುವ ಅಗತ್ಯವೂ ಇದೆ. ಏಕೆಂದರೆ ಬಾಲ್ಯದಲ್ಲಿಯೇ ಮಕ್ಕಳಲ್ಲಿ ಉನ್ನತ ಮೌಲ್ಯಗಳನ್ನು, ವಿಶಾಲ ದೃಷ್ಟಿಯನ್ನು ಬೆಳೆಸುವ ಸಾಹಿತ್ಯವನ್ನು ಮಾತ್ರ ಮಕ್ಕಳಿಗೆ ದೊರೆಯುವಂತೆ ಮಾಡಬೇಕೇ ಹೊರತು, ಜಾತಿ, ಮತ, ಮೌಢ್ಯಗಳನ್ನು ಒಳಗೊಂಡ ಸಂಕುಚಿತ ವ್ಯಕ್ತಿತ್ವಗಳನ್ನು ನಿರ್ಮಾಣ ಮಾಡುವ ಸಾಹಿತ್ಯದಿಂದ ಮಕ್ಕಳನ್ನು ದೂರವಿರಿಸಬೇಕಾಗುವ ಅಗತ್ಯವೂ ನಮ್ಮ ಮುಂದಿದೆ.

ಜಾಗತೀಕರಣದ ಕಾಲದಲ್ಲಿರುವ ನಾವು ದೊಡ್ಡ ಪ್ರಮಾಣದಲ್ಲಿ ಅನೇಕ ನೆಲೆಗಳಲ್ಲಿ ಅಭಿವೃದ್ಧಿಯನ್ನು ಸಾಧಿಸಿದ್ದೇವೆ. ಆದರೂ ಅದೇ ಪ್ರಮಾಣದಲ್ಲಿ ಸಾಮಾಜಿಕ, ಆರ್ಥಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಬಿಕ್ಕಟ್ಟುಗಳಲ್ಲಿ ನರಳುತ್ತಿದ್ದೇವೆ. ಜಗತ್ತಿನಾದ್ಯಂತ ಅನೇಕ ಪರಿಹರಿಸಲಾರದ ಸಮಸ್ಯೆಗಳು ಸಮಷ್ಟಿ ಜೀವ ಸಂಕುಲಗಳ ಮಾರಕತೆಗೆ ಹಾನಿ ತರುವಷ್ಟು ಪ್ರಮಾಣದಲ್ಲಿ ಉಲ್ಬಣಿಸಿವೆ. ಪರಿಸರ ಸಮಸ್ಯೆಗಳು, ಧಾರ್ಮಿಕ ಕಲಹಗಳು, ಧರ್ಮಾಧರ್ಮಗಳ ನಡುವಿನ ಕಲಹಗಳು, ಗಡಿ ಸಮಸ್ಯೆ, ನೀರಿಗಾಗಿ ನಡೆಯುತ್ತಿರುವ ಜಲಯುದ್ಧಗಳು, ಜಾಗತಿಕ ಆರ್ಥಿಕ ನೀತಿಗಳಿಂದ ಎದುರಾಗಿರುವ ದಾಸ್ಯದ ಬಿಕ್ಕಟ್ಟುಗಳು, ಜಾಗತಿಕ ಭಯೋತ್ಪಾದನೆ, ಜನಸಂಖ್ಯಾ ಸಮಸ್ಯೆ - ಈ ಎಲ್ಲ ಬಗೆಯ ಸಮಸ್ಯೆಗಳಿಂದ ಸಮಷ್ಟಿ ಬದುಕೇ ಗೊಂದಲ, ಗೋಜಲುಗಳ ಗೂಡಾಗಿ, ನೆಮ್ಮದಿಯನ್ನು ಕದಡಿದೆ. ವೈಜ್ಞಾನಿಕವಾಗಿ, ತಾಂತ್ರಿಕವಾಗಿ, ಆರ್ಥಿಕವಾಗಿ ಪ್ರಸ್ತುತ ಜಗತ್ತು ಅಭಿವೃದ್ಧಿಯತ್ತ ಚಲಿಸುತ್ತಿದ್ದರು ಮಾನವನ ಅಂತರಂಗ ಮಾತ್ರ ಮತಮೌಢ್ಯಗಳ ಗೂಡಾಗಿದೆ.

ಪ್ರಪಂಚದ ದೊಡ್ಡ ಚಿಂತಕರು, ತತ್ವಜ್ಞಾನಿಗಳು, ಸಮಾಜ ವಿಜ್ಞಾನಿಗಳು, ಸಾಹಿತ್ಯ ಮತ್ತು ಸಾಂಸ್ಕೃತಿಕ ಚಿಂತಕರು ಶೋಧಿಸಿಕೊಂಡ, ವೈಚಾರಿಕತೆ ಹಾಗೂ ವೈಜ್ಞಾನಿಕತೆಯ ಸ್ಪರ್ಶವಿಲ್ಲದ ಅತಿಭೋಗರೋಗದ ಬೆನ್ನುಹತ್ತಿದ ಮಾನವನೇ

ಎಲ್ಲೆಲ್ಲೂ ತನ್ನ ಮೇಲಾಟವನ್ನು ನಡೆಸುತ್ತಿರುವ ಸನ್ನಿವೇಶ ಇದಾಗಿದೆ. ಸರಳವಾದ, ಸಹಜವಾದ ಬದುಕಿನಿಂದ ಮಾನವ ಬಹುದೂರ ಹೊರಟುಬಿಟ್ಟಿದ್ದಾನೆ. ಅಲ್ಲಿಂದ ಹಿಂತಿರುಗಲಾರದ ಅನೇಕ ಇಕ್ಕಟ್ಟಿನ ದಾರಿಗಳಲ್ಲಿ ನರಳುತ್ತಿರುವ ಸನ್ನಿವೇಶದಲ್ಲಿದ್ದಾನೆ. ತನ್ನ ಆತ್ಮಶ್ರೀಯನ್ನೇ ಬಲಿಗೊಟ್ಟು ಮಾನವ ತನ್ನ ದುರಂತಕ್ಕೆ ತಾನೇ ಮುನ್ನುಡಿಯನ್ನು ಬರೆದುಕೊಳ್ಳುತ್ತಿದ್ದಾನೆ. ಆದರೂ ಉನ್ನತ ಧ್ಯೇಯೋದ್ದೇಶಗಳಿಂದ ಜೀವಕೇಂದ್ರಿತ ಮೌಲ್ಯಗಳಾದ ಮಾನವೀಯತೆ, ಕರುಣೆ, ಅಹಿಂಸೆ, ಸಹಬಾಳ್ವೆ, ಪೂರ್ಣದೃಷ್ಟಿ, ಸಮನ್ವಯತೆ ಮೊದಲಾದ ಮೌಲ್ಯಗಳನ್ನು ಮೇಳೈಸಿಕೊಂಡಿರುವ ಸಾಹಿತ್ಯದ ಸಂಪರ್ಕದ ಸಾನಿಧ್ಯದಿಂದ ವಿಶ್ವದ ಒಳಿತನ್ನು ಬಯಸುವ ವಿಶ್ವಮಾನವ ಪ್ರಜ್ಞೆಯ ಕಡೆಗೆ ಚಲಿಸಬೇಕಾಗಿದೆ.

ಕುವೆಂಪು ಅವರು ಹೇಳಿದಂತೆ ಲೋಕ ಉಳಿದು ಬಾಳಬೇಕಾದರೆ ಎಲ್ಲರೂ ವಿಶ್ವಮಾನವರಾಗಬೇಕಾದ ಸಂದರ್ಭ ಇದಾಗಿದೆ. ಹಾಗಾಗಿ ಹುಟ್ಟುವ ಪ್ರತಿಯೊಂದು ಮಗುವಿಗೂ ಬಾಲ್ಯದಲ್ಲಿಯೇ ವಿಶ್ವಮಾನವ ತತ್ವಗಳಾದ ಪಂಚಮಂತ್ರ, ಸಪ್ತಸೂತ್ರಗಳ ಮೂಲಕ ಹೃದಯ ವೈಶಾಲ್ಯತೆಯನ್ನು ಬೆಳೆಸಬೇಕಾದ ತುರ್ತಿನ ಕಾಲವೂ ಇದಾಗಿದೆ. ಇಂಥ ವಿಚಾರಧಾರೆಯನ್ನು ಮೈವೆತ್ತ ಕುವೆಂಪು ಅವರು ಮಕ್ಕಳಿಗಾಗಿ ಬರೆದ ಸಾಹಿತ್ಯದ ವಿಶ್ಲೇಷಣೆಯನ್ನು ಇಲ್ಲಿ ಮಾಡಲಾಗಿದೆ. ಮುಂದಿನ ಸಾಹಿತ್ಯದ ಗೊತ್ತು ಗುರಿಗಳನ್ನು ಕುವೆಂಪು ಅವರ ಈ ಕೆಳಗಿನ ಉಲ್ಲೇಖ ಪ್ರಚುರಪಡಿಸುತ್ತದೆ.

> ನಿರ್ಜಾತೀಯ ನಿರ್ಮತೀಯವಾದ ಮೌಢ್ಯದೂರವಾದ ಚಿರಂತನಾಂಶಗಳಿಂದ, ವಿಶ್ವಮಾನವ ತತ್ವಗಳಿಂದ ಕೂಡಿದ್ದರೇನೇ ಸಾಹಿತ್ಯ ವಿಶ್ವಮಾನ್ಯವಾಗುತ್ತದೆ; ಉಳಿದದ್ದೆಲ್ಲ ತಿರಸ್ಕೃತವಾಗುತ್ತದೆ. ಅದು ದೀನ ದಲಿತರ, ಬಿದ್ದವರ, ನೊಂದವರ ನಾಲಗೆಯಾಗಬೇಕು; ನಾರಕೀಯವಾದ ಪಂಥ ಪದ್ಧತಿಗಳಿಂದ, ಅಮಾನವೀಯವಾದ ಶೋಷಕ ಪ್ರವೃತ್ತಿಗಳಿಂದ ಪ್ರಗತಿವಿರುದ್ಧವಾದ ಭಾವಗಳಿಂದ ಪರಂಪರೆಯನ್ನು ಪಾರುಮಾಡಿ, ಅದನ್ನು ಶುದ್ಧೀಕರಿಸಬೇಕು. ವೈಚಾರಿಕ ಮನೋಧರ್ಮ ಮತ್ತು ವೈಜ್ಞಾನಿಕ ದೃಷ್ಟಿ ಮುಂದಿನ ಸಾಹಿತ್ಯಕ್ಕೆ ಎರಡು ಕಣ್ಣುಗಳಾಗಬೇಕು.[೧]

ಈ ಮೇಲಿನ ಉಲ್ಲೇಖಗಳು ಪ್ರಸ್ತುತ ಸಂದರ್ಭದಲ್ಲಿ ಅಭಿವ್ಯಕ್ತಗೊಳ್ಳುವ ಸಾಹಿತ್ಯದ ಮೂಲಧ್ಯೇಯಗಳಾಗಬೇಕೆಂಬುದರಲ್ಲಿ ಎರಡು ಮಾತಿಲ್ಲ. ಈ ತತ್ವವನ್ನೇ ಅವರ ವಿಶ್ವಮಾನವ ಸಂದೇಶ ಅಥವಾ ಅವರ ಒಟ್ಟು ಸಾಹಿತ್ಯ ತನ್ನಲ್ಲಿ ಗರ್ಭೀಕರಿಸಿಕೊಂಡಿದೆ. ಅಂಥ ಸಾಹಿತ್ಯ ಕೃತಿಗಳು ಎಲ್ಲ ಮಕ್ಕಳ ಭಾವ ಹಾಗೂ ಮನೋಕೋಶಗಳನ್ನು ಪ್ರವೇಶಿಸಿ ಪ್ರತಿಯೊಬ್ಬರಲ್ಲಿಯೂ ಆತ್ಮಶ್ರೀಯನ್ನು ಬೆಳೆಸುವ ನಿಟ್ಟಿನಲ್ಲಿ ಕ್ರಿಯಾಶೀಲವಾಗಬೇಕಾಗಿದೆ.

ಕುವೆಂಪು ಅವರು ಶೋಧಿಸಿದ, ಆಶಿಸಿದ ಎಷ್ಟೋ ಜೀವನ ಮೌಲ್ಯಗಳು ಪೂರ್ಣಚಂದ್ರ ತೇಜಸ್ವಿಯವರ ಅಭಿವ್ಯಕ್ತಿಯ ಮಾದರಿಗಳಲ್ಲಿ ಮುಂದುವರಿಯುತ್ತವೆ. ಅಂಥ ಅಧ್ಯಯನಗಳು ಮುಂದೆ ನಡೆಯಬೇಕಾದ ಅಗತ್ಯವಿದೆ. ಮೊದಲೇ ಪ್ರಸ್ತಾಪಿಸಿದಂತೆ ಸಹಜ ಹಾಗೂ ಸರಳ ಬದುಕಿನಿಂದ ಬಹುದೂರ ಹೊರಟಿರುವ ಮಾನವ ಸಮುದಾಯ, ತಮ್ಮೆಲ್ಲ ಹಿಂಗದ ಆಸೆಗಳನ್ನು ಮಕ್ಕಳ ಮೇಲೆ ಹೇರುವ ಅಸಹ್ಯವಾದ ಪರಕೀಯ ಜೀವನ ಮೌಲ್ಯಗಳ ಅನುಕರಣೆಯನ್ನೇ ಪರಮೋದ್ದೇಶವೆಂದು ಸ್ವೀಕರಿಸುವಂತೆ ಒತ್ತಾಯಿಸುತ್ತಿವೆ. ಅಂಥ ಒತ್ತಾಸೆಗಳಿಂದ, ಏಕರೂಪ ಶಿಕ್ಷಣದಿಂದ ಎದುರಾಗುವ ಸಮಸ್ಯೆಗಳು, ಸ್ಥಳೀಯ ಬದುಕಿನ ಬಗೆಗಿನ ತಿರಸ್ಕಾರ, ವಿದೇಶಗಳ ಬಗೆಗಿನ ವ್ಯಾಮೋಹ, ಸ್ವಜಾತಿ, ಸ್ವಧರ್ಮಗಳ ಬಗೆಗಿನ ಕುರುಡು ನಂಬಿಕೆಗಳಿಗೆ ತುತ್ತಾಗುತ್ತಿವೆ. ತೇಜಸ್ವಿಯವರೇ ಹೇಳುವಂತೆ

ನಮ್ಮ ತಂದೆ ಮಕ್ಕಳ ಬಗ್ಗೆ ಯಾವ ಮಹತ್ವಾಕಾಂಕ್ಷೆಗಳನ್ನೂ ಇಟ್ಟುಕೊಳ್ಳದೆ ಅಥವಾ ಆರೋಪಿಸದೆ ನಮ್ಮನ್ನು ಬೆಳೆಸಿದರು. ನಾವು ಮಾನ ಮರ್ಯಾದೆಯಿಂದ ಬದುಕಿದರೆ ಸಾಕು ಎನ್ನುವುದು ಅವರ ಧೋರಣೆಯಾಗಿತ್ತು. ಹಾಗಾಗಿ ನನಗೆ ಓದುವಾಗಾಗಲೀ, ಅನಂತರವಾಗಲೀ ಹಾಗಾಗಬೇಕು ಹೀಗಾಗಬೇಕು, ದುಡ್ಡು ಮಾಡಬೇಕು, ಆಸ್ತಿ ಮಾಡಬೇಕು ಮೊದಲಾದ ಹಂಬಲ ಆಕಾಂಕ್ಷೆಗಳು ಇರಲಿಲ್ಲ ಅಥವಾ ಕಡಿಮೆ ಇತ್ತು. ಆಧುನಿಕ ಜೀವನದ ಸಂಕೀರ್ಣತೆಗಳು, ದ್ವಂದ್ವಗಳೂ ನಮ್ಮ ಮನಸ್ಸನ್ನು ಹಾಳು ಮಾಡಿ ತಲೆಕೆಡಿಸುವುದಕ್ಕೆ ಕಾರಣ"[೨] ಎನ್ನುತ್ತಾರೆ.

ಆಧುನಿಕ ಸಂದರ್ಭದಲ್ಲಿ ಜನಮರಳೊ ಜಾತ್ರೆ ಮರಳೊ ಎಂಬ ಗಾದೆಯ ಬೆನ್ನುಹತ್ತಿರುವ ತಂದೆ ತಾಯಿಗಳೇ ಪ್ರತಿಯೊಂದು ಮಗುವನ್ನು ದಿಕ್ಕು ತಪ್ಪಿಸುತ್ತಿರುವ, ಕುಬ್ಜತೆಗೆ ಬಲಿಕೊಡುತ್ತಿರುವ ಬಗೆಗೂ ಎಚ್ಚರಿಸುತ್ತಾರೆ.

ಪ್ರತಿಯೊಬ್ಬ ಮಗುವನ್ನೂ ಹಿರಿಯರೇ, ಹಿರಿಯರು ಕಟ್ಟಿರುವ ನಾಗರಿಕತೆಯೇ ಹಾಳು ಮಾಡುತ್ತಿರುವುದು. ದೊಡ್ಡವರು ತಮ್ಮ ಹುಚ್ಚಿನ ಅಚ್ಚಿಗೆ ತಕ್ಕಂತೆ ಮಕ್ಕಳನ್ನು ಎರಕಹೊಯ್ಯಲು ಪ್ರಯತ್ನಿಸುತ್ತಿದ್ದಾರೆ. ಈ ಅಪ್ಪಾ ಅಮ್ಮಂದಿರನ್ನೆಲ್ಲಾ ಪರಕಾಯ ಪ್ರವೇಶ ಮಾಡಲೆಳಸುವ ಬೆಂತರಗಳಿಗೆ ಹೋಲಿಸಬಹುದು. ತಮ್ಮ ಹಿಂಗದ ಆಸೆ ಅಭೀಪ್ಸೆಗಳಿಗೆ ಮಕ್ಕಳಲ್ಲಿ ಅಭಿವ್ಯಕ್ತಿಯನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಾರೆ. ಹಾಗಾಗಿ ಆ ಮಕ್ಕಳೂ ತಮ್ಮ ಸ್ವಭಾವಿಕ ಬದುಕನ್ನು ಬದುಕದೆ ಅವರು ದೊಡ್ಡವರಾಗುವ ಹೊತ್ತಿಗೆ ಇನ್ನೊಂದು ಪರಕಾಯಪ್ರವೇಶ ಮಾಡಲೆಳಸುವ ಬೆಂತರವೇ ಆಗಿ ರೂಪುಗೊಂಡಿರುತ್ತಾರೆ. ಎಷ್ಟೆಷ್ಟು ಮಕ್ಕಳಿಗೆ ಹಿಂಸೆ ಕೊಡುತ್ತಾರೆ, ಎಷ್ಟೆಷ್ಟು ಮಕ್ಕಳನ್ನು ಹೋಮ್‌ವರ್ಕಿನ ಹೆಣಭಾರದಲ್ಲಿ ಹುಗಿಯುತ್ತಾರೆ, ಎಷ್ಟೆಷ್ಟು ಟೈ ಕಟ್ಟಿಸಿ ಬೂಟ್ಸ್ ಹಾಕಿಸಿ ಗೋಳಾಡಿಸುತ್ತಾರೆ. ಅಷ್ಟಷ್ಟು ಆ ಶಾಲೆಗಳನ್ನು ಒಳ್ಳೆಯ ಶಾಲೆಗಳೆಂದು ಪರಿಗಣಿಸಲಾಗುತ್ತದೆ. ಅವುಗಳಿಗೆ ಹೆಚ್ಚಿನ ಕ್ಯಾಪಿಟೇಷನ್ ಶುಲ್ಕವೂ ದೊರೆಯುತ್ತಿದೆ. ಇಂಥ ಪೀಳಿಗೆಯ ಪರಿಣಾಮ ಏನಾದೀತೆಂದು ಊಹಿಸುವ ಅಗತ್ಯವೇ ಇಲ್ಲ. ಏಕೆಂದರೆ ಅದು ನಮ್ಮ ಕಣ್ಣೆದುರಿಗೇ ಕಾಣುತ್ತಿದೆ. ಈ ಮನೋವಿಕಾರಗಳ ಪರಿಣಾಮವೇ ಗೊಬ್ಬರದ ಗುಂಡಿಯಾಗುತ್ತಿರುವ ದೇಶ. ಹೀಗೆ ಹೇಳುತ್ತಾ ಪರಿಸರದ ಬಗ್ಗೆ ಬೂಟಾಟಿಕೆಯ ಕಳವಳ ಸೂಚಿಸುವುದೂ ಇವತ್ತಿನ ಫ್ಯಾಷನ್ ಆಗಿರುವುದರಿಂದ ಈ ಬಗ್ಗೆ ಹೆಚ್ಚು ಮಾತಾಡಲು ನನಗೆ ಇಷ್ಟವಿಲ್ಲ. ನಮ್ಮ ನದಿ ಝರಿಗಳನ್ನೆಲ್ಲಾ ಹಾಳು ಮಾಡಿ, ಈಗ ಆ ಕೈಗಾರಿಕೋದ್ಯಮಿಗಳೇ ಕುಡಿಯುವ ನೀರನ್ನು ಸೀಸೆಗಳಲ್ಲಿ ಮಾರಿ ಲಾಭ ಮಾಡುತ್ತಿದ್ದಾರೆ. ಕುಡಿಯುವ ನೀರನ್ನೂ ಕೊಂಡು ಕುಡಿಯಬೇಕಾದ ದುಃಸ್ಥಿತಿಗೆ ನಾವು ಒಗ್ಗಿ ಹೋಗುತ್ತಿದ್ದೇವೆ.[೩]

ಇಂಥ ಅನೇಕ ರೀತಿಯ ಆಧುನಿಕ ಕುರುಡು ನಂಬಿಕೆಗಳಿಗೆ, ಮೌಢ್ಯಗಳಿಗೆ ಮುಂದಿನ ಪೀಳಿಗೆ ಬಲಿಯಾಗದೆ ಹೊರಬರಬೇಕೆಂಬುದು ತೇಜಸ್ವಿಯವರ ಚಿಂತನೆಯಾಗಿದೆ. ಅಂಥ ಚಿಂತನೆ ಅವರ ಬದುಕು ಮತ್ತು ಸಾಹಿತ್ಯದಲ್ಲಿ ಘನೀಕೃತಗೊಂಡಿದೆ. ಅಂಥ ಮೌಲ್ಯಗಳ ಚಿಂತನೆಗಳ ಸಾಹಿತ್ಯವನ್ನು ಮಕ್ಕಳ ಕೈಗೆಟಕುವಂತೆ ಮಾಡುವ ಜವಾಬ್ದಾರಿಯು ನಮ್ಮ ಮುಂದಿದೆ. ಅಂಥ ಸಾಹಿತ್ಯದ ಅಧ್ಯಯನಗಳು ನಡೆಯಬೇಕಾದ ತುರ್ತು ಈಗ ಅತ್ಯಗತ್ಯವಾಗಿದೆ.

ಈ ಪ್ರಬಂಧದಲ್ಲಿ ಕುವೆಂಪು ಅವರ ಮಕ್ಕಳ ಕೃತಿಗಳಲ್ಲಿ ಮಾನವೀಯ ಮೌಲ್ಯಗಳ ಶೋಧವನ್ನು ಕುರಿತಂತೆ ಅಧ್ಯಯನವನ್ನು ನಡೆಸಿದ್ದೇವಾದರೂ ತೇಜಸ್ವಿಯವರ ಕೃತಿಗಳ ಅಧ್ಯಯನದಂತೆ ಇನ್ನಿತರ ಲೇಖಕರ ಕೃತಿಗಳ

ಅಧ್ಯಯನವನ್ನು ಮಾಡಬೇಕಾಗಿರುವ ಅಗತ್ಯವೂ ಇದೆ. ಹಾಗೆಯೇ ಅಂಥ ಸಾಹಿತ್ಯದಲ್ಲಿ ಬಳಕೆಯಾಗಿರುವ ಕನ್ನಡ ಭಾಷೆಯನ್ನು ಬಳಸಿಕೊಂಡಿರುವ ಬಗೆ, ಛಂದಸ್ಸು ಮೊದಲಾದ ಅಂಶಗಳನ್ನು ಕುರಿತ ಅಧ್ಯಯನಗಳು ನಡೆಯಬೇಕಾಗಿದೆ.

**ಅಡಿಟಿಪ್ಪಣಿ :**

೧. ಶಿವಾರೆಡ್ಡಿ ಕೆ.ಸಿ. (ಸಂ.), ಕುವೆಂಪು ಸಮಗ್ರ ಗದ್ಯ, ಸಂಪುಟ ೨, ಪ್ರಸಾರಾಂಗ, ಕ.ವಿ.ವಿ., ಹಂಪಿ, ೨೦೦೪, ಪುಟ ೯೬೦

೨. ನರೇಂದ್ರ ರೈ ದೇರ್ಲ, ತೇಜಸ್ವಿಯೊಳಗೊಬ್ಬ ಕಲಾವಿದ, ಕರ್ನಾಟಕ ಸಂಘ, ಪುತ್ತೂರು, ದಕ್ಷಿಣ ಕನ್ನಡ, ೧೯೯೯, ಪು. ೪

೩. ಅದೇ, ಪು. ೧-೨

* * *

## ಆಕರ ಗ್ರಂಥಗಳು


೧. ಕುವೆಂಪು, ಅಮಲನಕಥೆ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೪.

೨. – " –, ನನ್ನ ಗೋಪಾಲ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೩೦.

೩. – " –, ನನ್ನ ಮನೆ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೪೭

೪. – " –, ನರಿಗಳಿಗೇಕೆ ಕೋಡಿಲ್ಲ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೭೭.

೫. – " –, ಬೊಮ್ಮನಹಳ್ಳಿಯ ಕಿಂದರಿಜೋಗಿ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂಗು, ೧೯೨೬.

೬. – " –, ಮೇಘಪುರ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೪೭.

೭. – " –, ಮೋಡಣ್ಣನ ತಮ್ಮ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೬.

೮. – " –, ಮರಿವಿಜ್ಞಾನಿ, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೪೭.

೯. – " –, ಹಾಳೂರು, ಉದಯರವಿ ಪ್ರಕಾಶನ, ವಾಣಿವಿಲಾಸಪುರಂ, ಮೈಸೂರು, ೧೯೨೬.


* * *

# ಪರಾಮರ್ಶನ ಗ್ರಂಥಗಳು


೧. ಅಂಬಳಿಕೆ ಹಿರಿಯಣ್ಣ ಮತ್ತು ನೀಲಗಿರಿ ತಳವಾರ (ಸಂ), ಕುವೆಂಪು ಪುನರ್ಮನನ, ಪ್ರಸಾರಾಂಗ, ಮೈಸೂರು ವಿ.ವಿ., ಮೈಸೂರು, ೨೦೦೪.

೨. ಅರವಿಂದ ಮಾಲಗತ್ತಿ (ಪ್ರ.ಸಂ.), ಕುವೆಂಪು ಕೃತಿ ವಿಮರ್ಶೆ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., ಮೈಸೂರು, ೨೦೦೬.

೩. ಆನಂದ ವಿ. ಪಾಟೀಲ ಹಾಗೂ ನ. ರವಿಕುಮಾರ್ (ಸಂ), ಮಕ್ಕಳ ಸಾಹಿತ್ಯ ಶತಮಾನ, ಅಭಿನವ, ಬೆಂಗಳೂರು, ೨೦೦೧.

೪. ಕುಲಕರ್ಣಿ ಎಸ್.ಜಿ. (ಅನು), ರವೀಂದ್ರನಾಥ ಠಾಕೂರ್ ಬಾಲಸಾಹಿತ್ಯ, ಸಾಹಿತ್ಯ ಅಕಾಡೆಮಿ, ನವದಂಹಲಿ, ೧೯೬೫.

೫. ಕುವೆಂಪು, ನೆನಪಿನ ದೋಣಿಯಲ್ಲಿ ೧, ಸಹ್ಯಾದ್ರಿ ಪ್ರಕಾಶನ, ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು, ೧೯೮೦.

೬. ಕುವೆಂಪು, ಪಂಚತಂತ್ರ ಮತ್ತು ಸಪ್ತಸೂತ್ರ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು.

೭. ಕೃಷ್ಣಕುಮಾರ್ ಸಿ.ಪಿ. (ಸಂ), ಆಯ್ದ ಕುವೆಂಪು ಕವನಗಳು, ಬಾಪ್ಕೋ ಪ್ರಕಾಶನ, ಮೈಸೂರು ರಸ್ತೆ, ಬೆಂಗಳೂರು, ೧೯೮೪.

೮. ಕೃಷ್ಣಶಾಸ್ತ್ರೀ ಎ.ಆರ್., ರವೀಂದ್ರನಾಥ ಠಾಕೂರ್ ನಿಬಂಧ ಮಾಲಾ ಭಾಗ ೨, ಸಾಹಿತ್ಯ ಅಕಾಡೆಮಿ, ನವದೆಹಲಿ, ೧೯೬೩.

೯. ಗಾಂಧೀ. ಮೋ.ಕ., ಆತ್ಮಕಥೆ (ಸಂಕ್ಷಿಪ್ತ) ಮತ್ತು ಹಿಂದ್ ಸ್ವರಾಜ್, (ಅನು) ಸಿದ್ಧವನಹಳ್ಳಿ ಕೃಷ್ಣಶರ್ಮ, ಗಾಂಧೀ ಸ್ಮಾರಕ ನಿಧಿ, ೧೯೫೮.

೧೦. ಗುರುಲಿಂಗ ಕಾಪಸೆ (ಸಂ), ಮಕ್ಕಳ ಸಾಹಿತ್ಯ ಚಿಂತನೆ ಮತ್ತು ಸಿಸು ಸಂಗಮೇಶ ಸ್ಮರಣೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಬೆಂಗಳೂರು, ೨೦೦೨.

೧೧. ಚನ್ನಪ್ಪ ಎಸ್. (ಸಂ), ಕುವೆಂಪು ಸಾಹಿತ್ಯ ಸಪ್ತಾಹ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., ಮೈಸೂರು, ೧೯೯೬.

೧೨. ಜವರೇಗೌಡ ದೇ, ಸಹ್ಯಾದ್ರಿ, ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು, ೧೯೭೫.

೧೩. ದೇಜಗೌ, ಕುವೆಂಪು ಸಾಹಿತ್ಯ : ಕೆಲವು ಅಧ್ಯಯನಗಳು ಸಂಪುಟ ೨, ಸಹ್ಯಾದ್ರಿ ಪ್ರಕಾಶನ, ಶ್ರೀ ಕುವೆಂಪು ವಿದ್ಯಾ ಪರಿಷತ್ತು, ಜಯಲಕ್ಷ್ಮಿಪುರಂ, ಮೈಸೂರು, ೧೯೮೨.

೧೪. ನಾಗರಾಜ ಶೆಟ್ಟಿ ಟಿ.ಎಸ್., ಮಕ್ಕಳ ಸಾಹಿತ್ಯ : ಏಕೆ ಬೇಕು?, ನಿರ್ಮಲ ಪ್ರಕಾಶನ, ೯೫೭, 'ಸಂತೋಷ ಸಾಗರ', ಗೋವಿನಪುರ ಬಡಾವಣೆ, ತಿಪಟೂರು, ೧೯೯೫.

೧೫. ನಿರಂಜನ, ಪುಷ್ಪಹಾರ, ಯು.ಆರ್. ಶೆಣೈ ಅಂಡ್ ಸನ್ಸ್, ಮಂಗಳೂರು, ೧೯೫೭.

೧೬. ಪಂಜೆ ರಾಮರಾಯ (ಸಂ), ಪಂಜೆಯವರ ಕೃತಿಗಳು ಪದ್ಯಗಳು, ಸಂಪುಟ ೧, ಓರಿಯಂಟ್ ಲಾಂಗ್‌ಮನ್ ಲಿಮಿಟೆಡ್, ೧೯೭೩.

೧೭. ಪಂಜೆ ರಾಮರಾಯ (ಸಂ), ಪಂಜೆಯವರ ಕೃತಿಗಳು ಮಕ್ಕಳ ಕಥೆಗಳು, ಸಂಪುಟ ೨, ಓರಿಯಂಟ್ ಲಾಂಗ್‌ಮನ್ ಲಿಮಿಟೆಡ್, ೧೯೭೩.

೧೮. ಪಂಜೆ ರಾಮರಾಯ (ಸಂ), ಪಂಜೆಯವರ ಸಣ್ಣ ಕಥೆಗಳು ಮತ್ತು ಸಣ್ಣ ಕಾದಂಬರಿಗಳು, ಸಂಪುಟ ೩., ಓರಿಯಂಟ್ ಲಾಂಗ್‌ಮನ್ ಲಿಮಿಟೆಡ್, ೧೯೭೩.

೧೯. ಪಂಜೆ ರಾಮರಾಯ (ಸಂ), ಪಂಜೆಯವರ ಕೃತಿಗಳು ಪ್ರಬಂಧಗಳು ಮತ್ತು ಸಂಶೋಧನೆ, ಸಂಪುಟ ೪, ಓರಿಯಂಟ್ ಲಾಂಗ್‌ಮನ್ ಲಿಮಿಟೆಡ್, ೧೯೭೩.

೨೦. ಪರಮೇಶ್ವರ ಭಟ್ಟ ಎಸ್.ವಿ., ರಸ ಋಷಿ ಕುವೆಂಪು (ಮೊದಲ ಸಂಪುಟ), ಪ್ರಸಾರಾಂಗ, ಮೈಸೂರು ವಿ.ವಿ., ೧೯೯೫.

೨೧. ಪರಮೇಶ್ವರ ಭಟ್ಟ ಎಸ್.ವಿ., ರಸ ಋಷಿ ಕುವೆಂಪು (ಮೂರನೆಯ ಸಂಪುಟ), ಪ್ರಸಾರಾಂಗ, ಮೈಸೂರು ವಿ.ವಿ., ೧೯೯೬.

೨೨. ಪುಟ್ಟಪ್ಪ ಕೆ.ವಿ., ಕಿಂದರಿಜೋಗಿ ಮತ್ತು ಇತರ ಕಥನ ಕವನಗಳು, ಕಾವ್ಯಾಲಯ, ಶಿವಮೊಗ್ಗ, ೧೯೩೬.

೨೩. ಬಸವರಾಜ್ ಡಬ್ಲ್ಯು, ಶಿಶು ಸಾಹಿತ್ಯ ಪರಂಪರೆ ಮತ್ತು ಕುವೆಂಪು, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪.

೨೪. ಬೇದ್ರೆ ಎನ್. ಮಂಜುನಾಥ, ಕಿಂದರಿಜೋಗಿಯ ಕಥೆ ಸತ್ಯವೆ?, ಕಸ್ತೂರಿ ಕನ್ನಡ ಡೈಜೆಸ್ಟ್, ಸಂಚಿಕೆ ೧೧, ೨೦೦೭, ಪು - ೪೧-೪೪.

೨೫. ಬೊಳುವಾರು ಮಹಮದ್ ಕುಂಞ (ಸಂ.), ತಟ್ಟು ಚಪ್ಪಾಳೆ ಪುಟ್ಟ ಮಗು, ದಿವ್ಯ ಪ್ರಕಾಶನ, ಬೆಂಗಳೂರು, ೧೯೯೧.

೨೬. ರಾಜರತ್ನಂ ಜಿ.ಪಿ., ಕಂದನ ಕಾವ್ಯ ಮಾಲೆ, ಶಾಕ್ಯ ಸಾಹಿತ್ಯ ಮಂಟಪ, ಮಲ್ಲೇಶ್ವರಂ, ಬೆಂಗಳೂರು, ೧೯೮೫.

೨೭. ರಾಜೇಂದ್ರ ಡಿ.ಕೆ., ಕುವೆಂಪು ಸಾಹಿತ್ಯಾವಲೋಕನ, ಸಹ್ಯಾದ್ರಿ ಪ್ರಕಾಶನ, ಶ್ರೀ ಕುವೆಂಪು ವಿದ್ಯಾ ಪರಿಷತ್ತು, ಜಯಲಕ್ಷ್ಮಿಪುರಂ, ಮೈಸೂರು, ೧೯೮೫.

೨೮. ರಾಮನಾಥ ಭಟ್ ಜಿ. (ಅನು), ಬಿದಿಗೆಯ ಚಂದ್ರ, ಶುಭೋದಯ ಪ್ರಕಾಶನ, ಬೆಂಗಳೂರು, ೨೦೦೬.

೨೯. ವಿವಿಧ ಲೇಖಕರು, ಆಧುನಿಕ ಕನ್ನಡ ಸಾಹಿತ್ಯ ರೂಪಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೬.

೩೦. ವೇಣುಗೋಪಾಲರಾವ್ ಎ.ಎಸ್., ಶ್ರೀ ಕುವೆಂಪು ಅವರ ಕಾವ್ಯದಲ್ಲಿ ವಾತ್ಸಲ್ಯಭಾವ, ಸಹ್ಯಾದ್ರಿ ಪ್ರಕಾಶನ, ಜಯಲಕ್ಷ್ಮಿಪುರಂ, ಮೈಸೂರು, ೧೯೩೬.

೩೧. ಶಂಕರಾನಂದ (ಸಂ), ರಾಷ್ಟ್ರಕವಿ ಕುವೆಂಪು, ಸುರಾಜ್ಞಾನ ಚೇತನ ಮಾಲೆ, ೨೦೦೬.

೩೨. ಶಿವರಾಮ ಕಾರಂತ, ಹುಚ್ಚು ಮನಸ್ಸಿನ ಹತ್ತು ಮುಖಗಳು, ಹರ್ಷ ಮುದ್ರಣ, ಪ್ರಕಟಣಾಲಯ, ಪುತ್ತೂರು, ದ.ಕ., ೧೯೪೮.

೩೩. ಶಿವರಾಮು ಕಾಡನಕುಪ್ಪೆ, ಕುವೆಂಪು ಸಾಹಿತ್ಯ ವಿಚಾರ, ಸಹ್ಯಾದ್ರಿ ಪ್ರಕಾಶನ, ಜಯಲಕ್ಷ್ಮಿಪುರಂ, ಮೈಸೂರು, ೧೯೯೦.

೩೪. ಶಿವರುದ್ರಪ್ಪ ಜಿ.ಎಸ್., ಕುವೆಂಪು : ಪುನರಾಲೋಕನ, ಅಂಕಿತ ಪುಸ್ತಕ, ಬೆಂಗಳೂರು, ೨೦೦೫.

೩೫. ಶಿವಾರೆಡ್ಡಿ ಕೆ.ಸಿ. (ಸಂ), ಕುವೆಂಪು ಸಮಗ್ರ ಕಾವ್ಯ ಸಂಪುಟ ೧, ಪ್ರಸಾರಾಂಗ, ಕ.ವಿ.ವಿ., ಹಂಪಿ, ೨೦೦೦.

೩೬. – " – (ಸಂ), ಕುವೆಂಪು ಸಮಗ್ರ ಕಾವ್ಯ ಸಂಪುಟ ೨, ಪ್ರಸಾರಾಂಗ, ಕ.ವಿ.ವಿ., ಹಂಪಿ, ೨೦೧೦.

೩೭. – " – (ಸಂ), ಕುವೆಂಪು ಸಮಗ್ರ ಗದ್ಯ ಸಂಪುಟ ೧, ಪ್ರಸಾರಾಂಗ, ಕ.ವಿ.ವಿ., ಹಂಪಿ, ೨೦೦೩.

೩೮. – " – (ಸಂ), ಕುವೆಂಪು ಸಮಗ್ರ ಗದ್ಯ ಸಂಪುಟ ೨, ಪ್ರಸಾರಾಂಗ, ಕ.ವಿ.ವಿ., ಹಂಪಿ, ೨೦೦೪.

೩೯. – " – (ಸಂ), ಕುವೆಂಪು ಸಮಗ್ರ ನಾಟಕ, ಪ್ರಸಾರಾಂಗ, ಕ.ವಿ.ವಿ., ಹಂಪಿ, ೨೦೦೪.

೪೦. ಶ್ರೀನಿವಾಸರಾವ್ ಎಸ್.ವಿ., ಮಕ್ಕಳ ಸಾಹಿತ್ಯದ ನೆಲೆಬೆಲೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬.

೪೧. ಸ್ವಾಮಿ ಶಂಕರಾನಂದ ಸರಸ್ವತಿ, ರವೀಂದ್ರನಾಥ ಠಾಕೂರ್ ನಿಬಂಧಮಾಲಾ ಭಾಗ ೧, ಸಾಹಿತ್ಯ ಅಕಾಡೆಮಿ, : ವದೆಹಲಿ, ೧೯೭೫.

೪೨. Charlotte S. Huck and Doris young kuhn, Children's literature in the elementary school, Holt, rine hart and winston, Inc, Madison Avenue, Newyork, 1968.

* * *